ಅಭಿಜ್ಞಾನ
ಸಂಸ್ಕೃತಸ್ಪಂದಃ 4

ಶ್ರೀಮದನ್ನಂಭಟ್ಟವಿರಚಿತ

# ತರ್ಕಸಂಗ್ರಹ

ಮೂಲ, ಕನ್ನಡ ಅನುವಾದ, ಟಿಪ್ಪಣಿ, ದೀಪಿಕಾಸಹಿತ

ಸಂಪಾದಕರು ಮತ್ತು ಅನುವಾದಕರು
**ಮಹೇಶ ಅಡಕೋಳಿ**
**ಶಂಕರ ಭಟ್ಟ**

ಸಂಸ್ಕೃತಸ್ಪಂದಃ - 4

ಶ್ರೀಮದನ್ನಂಭಟ್ಟವಿರಚಿತ

# ತರ್ಕಸಂಗ್ರಹ

(ಮೂಲ, ಕನ್ನಡ ಅನುವಾದ, ಟಿಪ್ಪಣಿ, ದೀಪಿಕಾಸಹಿತ)

ಸಂಪಾದಕರು ಮತ್ತು ಅನುವಾದಕರು

ಮಹೇಶ ಅಡಕೋಳಿ

ಶಂಕರ ಭಟ್ಟ

2017

ಮೂವತ್ತನೆಯ ಪ್ರಕಟನೆ



ಅಭಿಜ್ಞಾನ

ನಂ. 2, ದತ್ತಾತ್ರೇಯ ದೇವಸ್ಥಾನ ರಸ್ತೆ, ಪೈಪ್‌ಲೈನ್

ಮಲ್ಲೇಶ್ವರಂ, ಬೆಂಗಳೂರು - 560 003

© 0 94484 94949

www.abhijnana.org

TARKASAŃGRAHA
A treatise on Nyāya-Vaiśeṣika philosophy by Annambhaṭṭa
(Kannada translation with notes by Dr. Mahesh Adkoli and Dr. Shankara Bhatta)
Published by Abhijñāna. No. 2, Dattatreya Temple Road, Pipeline, Malleshwaram, Bangalore - 560 003. www.abhijnana.org
Revised Third Edition: 2009 Pages: x+126
Revised Fourth Edition: 2017



ABHIJNANA
Ph: 09449028282
ಪುಟಗಳು:
ಬೆಲೆ: ರೂ.₹150
ಪರಿಷ್ಕೃತ ತೃತೀಯ ಆವೃತ್ತಿ: 2009
ಪರಿಷ್ಕೃತ ಚತುರ್ಥ ಆವೃತ್ತಿ: 2017
(ಅಭಿಜ್ಞಾನದಿಂದ ದ್ವಿತೀಯಮುದ್ರಣ)

ISBN: 978-81-88278-22-0

ಮುಖಪುಟವಿನ್ಯಾಸ:
ಪ್ರಥಮ್ ವರ್ಲ್ಡ್

ಅಕ್ಷರಜೋಡಣೆ ಮತ್ತು ಮುದ್ರಣ:
ಗಾಯತ್ರೀ ಪ್ರಿಂಟ್ಸ್
ಬೆಂಗಳೂರು - 560050

ಪ್ರತಿಗಳಿಗಾಗಿ ಸಂಪರ್ಕಿಸಿ:
232/4, 4ನೇ ಮುಖ್ಯರಸ್ತೆ, ಶ್ರೀನಿವಾಸನಗರ
ಬೆಂಗಳೂರು - 560050
ದೂರವಾಣಿ: 080-26699367, 94484 94949

# ಪರಿವಿಡಿ

# 'ಸಂಸ್ಕೃತಸ್ಪಂದಃ'

*I do feel that one ought not to speak at all of other religions than one's own unless one has a knowledge of their scriptures comparable to that which one has of one's own. This is especially true as regards Indian religions, where one who does not read Sanskrit or Pali has to rely on translations made by scholars who are themselves usually nominalists and rationalists, quite ignorant of the technical terms of theology and metaphysics. The result of relying on them is only to add to the already too prevalent misunderstandings.*

***—Ananda K. Coomaraswamy***

ಭಾರತವನ್ನಾಗಲೀ ಭಾರತೀಯತೆಯನ್ನಾಗಲೀ ಸರಿಯಾಗಿ ಅರ್ಥಮಾಡಿಕೊಳ್ಳಲು ಆವಶ್ಯಕವಾದ ಅರ್ಹತೆಯೆಂದರೆ ಸಂಸ್ಕೃತಭಾಷೆಯ ತಿಳಿವು ಮತ್ತು ನಮ್ಮ ಮೂಲಗ್ರಂಥಗಳ ಅರಿವು. ಭಾರತದ ಹೃದಯಕ್ಕೆ ಹತ್ತಿರವಾಗಲು ನಮಗೆ ಇರುವ ಮಾರ್ಗವೆಂದರೆ ದಾರ್ಶನಿಕ ಆನಂದ ಕುಮಾರಸ್ವಾಮಿ ಹೇಳುವಂತೆ 'ಮೂಲಕ್ಕೇ ಹೋಗುವುದು'. ಈ ಮೂಲವನ್ನು ತಲಪಲು ಇರುವ ದಾರಿಗಳಲ್ಲಿ ರಾಜಮಾರ್ಗದಂತಿರುವುದೇ ಸಂಸ್ಕೃತ. ಸಂಸ್ಕೃತವನ್ನು ಕಲಿಯಲು, ಮೂಲಗ್ರಂಥಗಳನ್ನು ಅಧ್ಯಯನ ಮಾಡಲು ಸಹಾಯಕವಾಗುವಂಥ ಕೃತಿಗಳನ್ನು ತರುವ ಯೋಜನೆಯೇ ನಮ್ಮ ಈ ಸಂಸ್ಕೃತಸ್ಪಂದಃ; ಈ ಮಾಲಿಕೆಯಲ್ಲಿ ಈಗಾಗಲೇ ಮೂಲ-ಕನ್ನಡ ಅನುವಾದ-ಟಿಪ್ಪಣಿಗಳೊಂದಿಗೆ, ಶ್ರೀಭೋಜರಾಜಸಾರ್ವಭೌಮವಿರಚಿತ ಚಂಪೂ ರಾಮಾಯಣದ ಕಿಷ್ಕಿಂಧಾಕಾಂಡ, ಬಾಲಕಾಂಡ ಮತ್ತು ಸೂಕ್ತಿಕೋಶ ಎಂಬ ಕೃತಿಗಳು ಪ್ರಕಟವಾಗಿವೆ. ಶ್ರೀಮದನ್ನಂಭಟ್ಟನ ತರ್ಕಸಂಗ್ರಹದ ಪರಿಷ್ಕೃತ ಆವೃತ್ತಿ ಈಗ ನಿಮ್ಮ ಕೈ ಸೇರಿದೆ. ಸದ್ಯದಲ್ಲಿಯೇ ಚಂಪೂರಾಮಾಯಣದ ಸುಂದರಕಾಂಡವು ಅನುವಾದ-ಟಿಪ್ಪಣಿಗಳೊಂದಿಗೆ ಪ್ರಕಟವಾಗಲಿದೆ.

**—ಎಸ್. ಸೂರ್ಯಪ್ರಕಾಶ ಪಂಡಿತ್**
*ಸಂಪಾದಕ*

# ಕೃತಜ್ಞತೆಗಳು

ಭಾರತೀಯದರ್ಶನಶಾಸ್ತ್ರದಲ್ಲಿ ವಿಶೇಷಸ್ಥಾನವನ್ನು ಸಂಪಾದಿಸಿರುವ ತರ್ಕಸಂಗ್ರಹ-ವನ್ನು ಮೂಲ, ಕನ್ನಡ ಅನುವಾದ, ಟಿಪ್ಪಣಿ, ದೀಪಿಕಾಸಹಿತವಾಗಿ ಸಂಪಾದಿಸಿ-ಕೊಟ್ಟಿರುವ ವಿದ್ವಾಂಸರಾದ ಡಾ. ಮಹೇಶ ಅಡಕೋಳಿ ಮತ್ತು ಡಾ. ಶಂಕರ ಭಟ್ಟ ಅವರಿಗೆ ನನ್ನ ನಮನಗಳು.

ಅಭಿಜ್ಞಾನ ಬಳಗದವರೇ ಆದ ಶ್ರೀ ಮಹೇಶಭಟ್ಟ ಆರ್. ಹಾರ್ಯಾಡಿ ಅವರು ತುಂಬ ಶ್ರಮವಹಿಸಿ ಕರಡನ್ನು ತಿದ್ದಿಕೊಟ್ಟಿದ್ದಾರೆ. ಅವರ ವಿದ್ವತ್ತಿಗೂ ತಾಳ್ಮೆಗೂ ನನ್ನ ಅನಂತ ಕೃತಜ್ಞತೆಗಳು. ಹೀಗೆಯೇ ಶ್ರೀ ಹರೀಶ್ ಹಾಗಲವಾಡಿ ಅವರೂ ಜೊತೆಯಾಗಿದ್ದಾರೆ. ಅವರಿಗೂ ಕೃತಜ್ಞತೆಗಳು. ಎಂದಿನಂತೆ, ಈ ಕೃತಿಯ ಪ್ರಕಟನೆಯಲ್ಲೂ ಉತ್ಸಾಹದಿಂದ ಜೊತೆಯಾಗಿರುವ ಅಭಿಜ್ಞಾನದ ಸಂಚಾಲಕರಲ್ಲೊಬ್ಬರಾದ ಶ್ರೀ ಬಿ. ಎಸ್. ಸೂರ್ಯಪ್ರಕಾಶ್ ಅವರನ್ನು ಇಲ್ಲಿ ನೆನೆಯುತ್ತೇನೆ.

ಇಂಥ ಕೃತಿಯ ಅಕ್ಷರಜೋಡಣೆ ಮತ್ತು ಮುದ್ರಣವನ್ನು ಮಾಡಿಕೊಟ್ಟಿರುವ ಗಾಯತ್ರಿ ಪ್ರಿಂಟ್ಸ್‌ನ ಶ್ರೀ ರಜನೀಶ ಅವರಿಗೂ, ಆಕರ್ಷಕವಾಗಿ ಮುಖಪುಟವಿನ್ಯಾಸ ಮಾಡಿರುವ ಪ್ರಥಮ್ ವರ್ಲ್ಡ್ ಅವರಿಗೂ ನಮನಗಳು.

ಅಭಿಜ್ಞಾನದಿಂದ 2009ರಲ್ಲಿ ಪ್ರಕಟವಾಗಿದ್ದ ಪರಿಷ್ಕೃತ ಆವೃತ್ತಿಯ ಪ್ರತಿಗಳೆಲ್ಲ ಮುಗಿದುಹೋಗಿದ್ದವು. ವಿದ್ಯಾರ್ಥಿಗಳಿಂದಲೂ ವಿದ್ವಾಂಸರಿಂದಲೂ ಬೇಡಿಕೆ ಇದ್ದುದ್ದರಿಂದ ಈಗ ಮತ್ತಷ್ಟು ಪರಿಷ್ಕಾರದಿಂದ ಈ ನೂತನ ಆವೃತ್ತಿಯನ್ನು ಪ್ರಕಟಿಸುತ್ತಿದ್ದೇವೆ. ನಿಮ್ಮ ಸಲಹೆ-ಸೂಚನೆಗಳಿಗೆ ಸದಾ ಸ್ವಾಗತ. ಇಂಥ ಶಾಸ್ತ್ರೀಯಗ್ರಂಥಗಳನ್ನು ಪ್ರಕಾಶಿಸುವುದು ಶ್ರಮದಾಯಕವಾದದ್ದು. ಓದುಗರ ಬೆಂಬಲ ದೊರೆತರಷ್ಟೆ ಇಂಥ ಕೃತಿಗಳನ್ನು ಹೆಚ್ಚೆಚ್ಚು ಪ್ರಕಟಪಡಿಸಲು ಸಾಧ್ಯ. ಅಭಿಜ್ಞಾನವನ್ನು ಹರಸುತ್ತಿರುವ ಎಲ್ಲ ಪ್ರತ್ಯಕ್ಷ-ಪರೋಕ್ಷ ಸಹೃದಯಬಂಧುಗಳಿಗೂ ನಾವು ಋಣಿ.

ಎಂದರೋ ಮಹಾನುಭಾವುಲು ಅಂದರಿಕಿ ವಂದನಮುಲು

ಗುರುಪೂರ್ಣಿಮಾ<br>9-7-2017

—ಎಸ್. ಸೂರ್ಯಪ್ರಕಾಶ ಪಂಡಿತ್

*ಸಂಪಾದಕ-ಪ್ರಕಾಶಕ*

suryaprakashpandit@gmail.com

# ಸಂಪಾದಕರ ಬಿನ್ನಹ

ತರ್ಕಸಂಗ್ರಹದ ತೃತೀಯ (ಪರಿಷ್ಕೃತ) ಆವೃತ್ತಿ ಇದು. ತರ್ಕಸಂಗ್ರಹ ದೀಪಿಕೆಯಲ್ಲಿಯ ಪ್ರಾಮಾಣ್ಯವಾದ, ಮುಕ್ತಿವಾದ ಮುಂತಾದ ಕೆಲವು ವಿಶೇಷವಿಚಾರಗಳನ್ನು ಕನ್ನಡಟಿಪ್ಪಣಿಯಲ್ಲಿ ಸೇರಿಸಲಾಗಿದೆ. ಜೊತೆಗೆ ವಿಶೇಷಜಿಜ್ಞಾಸುಗಳಿಗಾಗಿ ದೀಪಿಕೆಯನ್ನೂ ಅನುಬಂಧದ ರೂಪದಲ್ಲಿ ನೀಡಿದ್ದೇವೆ. (ಸೌಲಭ್ಯಕ್ಕಾಗಿ ತರ್ಕಸಂಗ್ರಹಮೂಲದ ಆಯಾ ಘಟಕಗಳಿಗೆ ಸಂವಾದಿಯಾಗಿ ದೀಪಿಕೆಯಲ್ಲೂ ಘಟಕಗಳನ್ನು ಮಾಡಲಾಗಿದೆ.)

ಹಿಂದಿನ ಎರಡೂ ಆವೃತ್ತಿಗಳನ್ನು ಪ್ರಕಾಶಿಸುವ ಭಾರವನ್ನು ನಾವೇ ಹೊತ್ತಿದ್ದೆವು. ಆದರೀಗ 'ಅಭಿಜ್ಞಾನ'ದ ಶ್ರೀ ಸೂರ್ಯಪ್ರಕಾಶ ಪಂಡಿತರು ನಮ್ಮ "ಭಾರಾವತಾರಕ್ಷಮ"ರಾಗಿ ಈ ಗ್ರಂಥವನ್ನು ಪ್ರಕಾಶಿಸುತ್ತಿದ್ದಾರೆ. ಅವರು ಈ ಭಾರವನ್ನು ಸಲೀಲವಾಗಿ ಹೊರುವಂತೆ ಸಹಾನುಭೂತಿ ಪರರಾದ ತರ್ಕಜಿಜ್ಞಾಸುಗಳು ಸಹಕರಿಸುವರೆಂಬ ಸದಾಶಯ ನಮ್ಮದು.

ಡಾ|| ಬಾಳಿಗಾ ಕಾಲೇಜು
ಕುಮಟಾ, ಉತ್ತರ ಕನ್ನಡ
ಡಿಸೆಂಬರ್, 2008

ಮಹೇಶ ಅಡಕೋಳಿ
ಶಂಕರ ಭಟ್ಟ

ಚತುರ್ಥ (ಪರಿಷ್ಕೃತ) ಆವೃತ್ತಿ ಪುನರ್ಮುದ್ರಣಕ್ಕೆ ಸಜ್ಜುಗೊಳ್ಳುತ್ತಿರುವಾಗ ಪ್ರತ್ಯಕ್ಷರ ಪರೀಕ್ಷೆಯನ್ನು ಮಾಡಿ ಇನ್ನೂ ಪರಿಷ್ಕರಿಸುವ ಶ್ರಮವನ್ನು ಹೊತ್ತ ಶ್ರೀ ಮಹೇಶಭಟ್ಟ ಆರ್. ಹಾರ್ಯಾಡಿ ಅವರ ವಿದ್ವತ್ಪ್ರೀತಿಗೆ ಕೃತಜ್ಞತೆಗಳು.

ಕುಮಟಾ, ಉತ್ತರ ಕನ್ನಡ
9-7-2017

ಮಹೇಶ ಅಡಕೋಳಿ
ಶಂಕರ ಭಟ್ಟ

# ಅರಿಕೆ

(ಪ್ರಥಮ ಮುದ್ರಣ)

ಪ್ರಮುಖದರ್ಶನಗಳಲ್ಲೊಂದಾದ ತಾರ್ಕಿಕದರ್ಶನದ ಮೂಲಭೂತಸಿದ್ಧಾಂತಗಳನ್ನೊಳಗೊಂಡ 'ತರ್ಕಸಂಗ್ರಹ'ವನ್ನು ಪಾಠ್ಯಪುಸ್ತಕರೂಪದಲ್ಲಿ ಪ್ರಕಟಿಸುತ್ತಿದ್ದೇವೆ. ಕನ್ನಡದಲ್ಲಿ ಸರಳನಿರೂಪಣೆಯಿರುವ ಈ ಗ್ರಂಥದ ಒಂದು ವ್ಯವಸ್ಥಿತಪಾಠ್ಯಪುಸ್ತಕದ ಅಭಾವ ಓದುಗರಿಗೆ ಅದರಲ್ಲಿಯೂ ವಿದ್ಯಾರ್ಥಿಗಳಿಗೆ ಉಂಟುಮಾಡುತ್ತಿದ್ದ ಅನಾನುಕೂಲ್ಯ ದೀರ್ಘಕಾಲದಿಂದಲೂ ನಮ್ಮನ್ನು ಬಾಧಿಸುತ್ತಿತ್ತು. ಆದ್ದರಿಂದ ಯಥಾಶಕ್ತಿ ತರ್ಕಸಂಗ್ರಹದ ಸರಳ ನಿರೂಪಣೆಯನ್ನು ಒಳಗೊಂಡ ಗ್ರಂಥವನ್ನು ರಚಿಸಬೇಕೆಂಬ ಸಂಕಲ್ಪ ಈಗ ಮೂರ್ತರೂಪ ಪಡೆಯುತ್ತಿದೆ.

ಭಾರತೀಯ ಪ್ರಮುಖದರ್ಶನಗಳ ಸಂಕ್ಷಿಪ್ತ ಪರಿಚಯ ಮತ್ತು ತರ್ಕಸಂಗ್ರಹದ ಪರಿಚಯಾತ್ಮಕವಾದ ಭೂಮಿಕೆ, ದೇವನಾಗರಿಲಿಪಿಯಲ್ಲಿ ಗ್ರಂಥದ ಮೂಲಭಾಗ, ಸರಳ ಕನ್ನಡಾನುವಾದ ಮತ್ತು ತರ್ಕಸಂಗ್ರಹವನ್ನು ಅರ್ಥೈಸಿಕೊಳ್ಳಲು ಸಹಕಾರಿಯಾದ ಕನ್ನಡ, ಸಂಸ್ಕೃತ ಹಾಗೂ ಆಂಗ್ಲಗ್ರಂಥಗಳನ್ನು ಅವಲೋಕಿಸಿ ರೂಪಿತಗೊಂಡ ಟಿಪ್ಪಣಿ ಇವು ಈ ಪ್ರಕಟನೆಯ ವೈಶಿಷ್ಟ್ಯಗಳು. ಹೀಗಿದ್ದರೂ ಪಾರಿಭಾಷಿಕಪದಪ್ರಯೋಗವಿಲ್ಲದಿದ್ದರೆ ಕೆಲವು ವಿಷಯಗಳ ಸ್ವ-ರೂಪವೇ ಊನವಾಗುವ ಭೀತಿಯಿದ್ದುದರಿಂದ ನಿರೂಪಣೆ ಅಲ್ಲಲ್ಲಿ ಕ್ಲಿಷ್ಟವಾಗುವ ಅನಿವಾರ್ಯತೆ ಇದ್ದೇ ಇದೆ.

ಈ ಗ್ರಂಥ ಹೀಗೆ ಬೆಳಕು ಕಾಣಲು ಶ್ರಮಿಸಿದ ಅಮರ ಪ್ರಕಾಶನ, ಸಾಗರ, ಮೈತ್ರಿ ಮುದ್ರಣ, ಗೋಕರ್ಣ, ರಕ್ಷಾಪುಟದ ವಿನ್ಯಾಸ ಹಾಗೂ ಮುದ್ರಣದ ಹೊಣೆ ಹೊತ್ತ ಮಿತ್ರ ಶ್ರೀ ಪಿ. ವಿ. ಭಟ್ಟ, ಗ್ರಂಥರಚನೆಗೆ ಅಪ್ರತ್ಯಕ್ಷವಾಗಿ ಪ್ರಚೋದಿಸಿದ ಸಮಸ್ತ ವಿದ್ಯಾರ್ಥಿಸಮುದಾಯ ಹಾಗೂ ನೀವು—ಎಲ್ಲರಿಗೂ ಹೃತ್ಪೂರ್ವಕ ಕೃತಜ್ಞತೆಗಳು.

ಡಾ|| ಬಾಳಿಗಾ ಕಾಲೇಜು  
ಕುಮಟಾ - 581 362  
ಸಪ್ಟಂಬರ್ 1992

ಮಹೇಶ ಅಡಕೋಳಿ  
ಶಂಕರ ಭಟ್ಟ

---

(ದ್ವಿತೀಯ ಪರಿಷ್ಕೃತ ಮುದ್ರಣ)

'ತರ್ಕಸಂಗ್ರಹ'ದ ಈ ಪರಿಷ್ಕೃತ ಆವೃತ್ತಿಯನ್ನು ತಮ್ಮ ಕೈಯಲ್ಲಿಡಲು ಸಂತಸವೆನಿಸುತ್ತದೆ. ಪ್ರಥಮ ಮುದ್ರಣದಲ್ಲಿಯ ಮುದ್ರಣದೋಷಗಳನ್ನು ಹಾಗೂ ಅನುವಾದ-ಟಿಪ್ಪಣಿಗಳಲ್ಲಿಯ ನ್ಯೂನತೆಗಳನ್ನು ಈ ಮುದ್ರಣದಲ್ಲಿ ಯಥಾಮತಿ ಪರಿಹರಿಸಿದ್ದೇವೆ ಎಂಬ ಧನ್ಯತೆ ನಮ್ಮದು. ದೀಪಿಕೆಯ ಕೆಲವುಭಾಗಗಳನ್ನು ಮೂಲದಲ್ಲಿಯೇ ನೀಡಬೇಕೆಂದು ಸಂಕಲ್ಪಿಸಿದ್ದೇವಾದರೂ ಟಿಪ್ಪಣಿಗಳಲ್ಲಿ ದೀಪಿಕೆಯ ಆಯಾ ಭಾಗಗಳ ಕನ್ನಡರೂಪ ಬಂದಿರುವುದರಿಂದ ಪುನರುಕ್ತಿಯನ್ನು ಪರಿಹರಿಸಲು ಮೂಲವನ್ನು ಕೈಬಿಡಬೇಕಾಯಿತು.

ಈ ಗ್ರಂಥ ಮತ್ತೊಮ್ಮೆ ಬೆಳಕನ್ನು ಕಾಣಲು ಕಾರಣಕರ್ತರಾದವರು ಶಿರಸಿಯಲ್ಲಿನ 'ಸಂಶೋಧನ'(ಸಂಸ್ಕೃತ ಶೋಧ ಸಂಸ್ಥಾನ)ದ ಅಧ್ಯಕ್ಷರೂ ಆದರಣೀಯ ಗುರುಗಳೂ ಆದ ಡಾ|| ದಯಾನಂದ ಶಾನಭಾಗ ಅವರು. ಅವರಿಗೂ 'ಸಂಶೋಧನ'ದ ಎಲ್ಲ ಪದಾಧಿಕಾರಿಗಳಿಗೂ ನಮ್ಮ ಅನಂತ ಧನ್ಯವಾದಗಳು.

ಈ ಗ್ರಂಥದ ಸ್ವರೂಪ ಹೀಗಿರಬೇಕು ಎಂಬ ನಮ್ಮ ಕಲ್ಪನೆಗೆ ಆಕಾರವನ್ನು ನೀಡಿದ 'ವಾಗರ್ಥ'ದ ಮಿತ್ರರಾದ ಶ್ರೀ ಎಮ್. ಎನ್. ಪ್ರಸಾದ ಘಣಿ, ರಾಘವೇಂದ್ರ ಅವರಿಗೂ ಮುದ್ರಣದ ಸಂದರ್ಭದಲ್ಲಿ ಸಹಕಾರವನ್ನು ನೀಡಿದ ಡಾ|| ಎಸ್. ಆರ್. ಲೀಲಾ, ಬೆಂಗಳೂರು ಹಾಗೂ ಪರಿಷ್ಕಾರಸಂಬಂಧಿಸಲಹೆಗಳನ್ನು ಸೂಚಿಸಿದ ವಿದ್ವಾನ್ ಉಮಾಕಾಂತ ಭಟ್ಟ, ಮೇಲುಕೋಟೆ ಅವರಿಗೂ ನಮ್ಮ ಕೃತಜ್ಞತೆಗಳು.

ಡಾ|| ಬಾಳಿಗಾ ಕಾಲೇಜು  
ಕುಮಟಾ - 581 362  
ಜೂನ್, 2003

ಮಹೇಶ ಅಡಕೋಳಿ  
ಶಂಕರ ಭಟ್ಟ

# ಭೂಮಿಕೆ

## ದರ್ಶನದ ಉಗಮ

"ವಿಶ್ವ ಎಂಬುದು ಮೊದಲ ಮತ್ತು ಕೊನೆಯ ಪುಟಗಳನ್ನು ಕಳೆದುಕೊಂಡ ಒಂದು ಪುಸ್ತಕದಂತೆ". ಪರ್ಷಿಯಾದೇಶದ ಕವಿಯೊಬ್ಬನ ಈ ಉದ್ಗಾರದಲ್ಲಿ ಪ್ರಪಂಚದ ಸಮಸ್ತ ಅನ್ವೇಷಣೆಗಳ ಮೂಲಪ್ರಚೋದನೆಯ ಚಿತ್ರಣವಿದೆ. ಭೌತಿಕನೆಲೆಯಲ್ಲಿ ದೈಹಿಕ ಅಗತ್ಯಗಳಿಗೆ ಮಾತ್ರ ಸೀಮಿತವಾಗಿದ್ದ ಆದಿಮಾನವನ ಜೀವನ ಸುತ್ತಲಿನ ಪ್ರಕೃತಿಯ ವೈಚಿತ್ರ್ಯ ವೈಪರೀತ್ಯಗಳಿಂದ ಕ್ಷುಬ್ಧವಾದಾಗ ಸುಪ್ತವಾಗಿದ್ದ ಅವನ ಚಿತ್ತ ಜಾಗರಿತವಾಗಿ 'ಏನು'? 'ಏಕೆ'? 'ಹೇಗೆ'? ಎಂದೆಲ್ಲ ಪ್ರಶ್ನಿಸಲಾರಂಭಿಸಿತು. ವಿಶ್ವಪುಸ್ತಕದ ಕಳೆದುಹೋದ ಪುಟಗಳ ಈ ಅನ್ವೇಷಣೆ ಎರಡು ದಿಕ್ಕುಗಳಲ್ಲಿ ಸಾಗಿತು. ಒಂದು ದಿಕ್ಕು ಪ್ರಕೃತಿಯ ಶಕ್ತಿಗಳನ್ನು ಶ್ರದ್ಧಾಮೂಲಭಾವನೆಯಿಂದ ಅರ್ಥೈಸಹೊರಟು ಪುರಾಣ(Mythology)ವಾದರೆ ಇನ್ನೊಂದು ಬೌದ್ಧಿಕವಾಗಿ ವಿಶ್ಲೇಷಿಸುತ್ತ 'ದರ್ಶನ'ದ ಉಗಮಕ್ಕೆ ಕಾರಣವಾಯಿತು.

ಈ ದೃಶ್ಯಪ್ರಪಂಚ ಯಾವೆಲ್ಲ ಮೂಲ ಅಂಶಗಳಿಂದ ಉತ್ಪನ್ನವಾಗಿದೆ? ಆ ಮೂಲ ಅಂಶಗಳ ಸ್ವರೂಪವೇನು? ಆ ಸ್ವರೂಪವೇ ಪ್ರಪಂಚದ ನೈಜಸ್ವರೂಪವೆ? ನಾಮ ರೂಪಾತ್ಮಕವಾದ ಈ ಪ್ರಪಂಚಕ್ಕೆ ಕಾರಣವೇನು? ಇದರ ಕರ್ತೃ ಯಾರು? 'ನಾನು' ಎಂಬುದರ ಸ್ವರೂಪವೇನು? 'ನನ್ನ' ಆತ್ಯಂತಿಕ ಉದ್ದೇಶವೇನು? 'ನನಗೆ' ಮರಣಾನಂತರ ಅಸ್ತಿತ್ವವಿದೆಯೆ? ಮರಣ-ಜನನಗಳ ಈ ನಿರಂತರ ಆವರ್ತನೆಯಿಂದ ಬಿಡುಗಡೆ ಇದೆಯೆ? ಇಂತಹ ಪ್ರಶ್ನೆಗಳಿಗೆ ಪರಿಹಾರದ ಅನ್ವೇಷಣೆಯ 'ಮಾರ್ಗ' ಹಾಗೂ ಕಂಡುಕೊಂಡ 'ಪರಿಹಾರ' ಇವೆರಡಕ್ಕೂ 'ದರ್ಶನ' ಎಂಬ ಪದ ಅನ್ವಯಿಸುತ್ತದೆ.

## ದರ್ಶನದ ಅರ್ಥ

'ದರ್ಶನ' ಎಂಬ ಪದವನ್ನು दृश्यते अनेन इति ಎಂಬ ಕರಣವ್ಯುತ್ಪತ್ತಿಯಿಂದಲೂ दर्शनं-दृष्टिः इति ಎಂಬ ಭಾವವ್ಯುತ್ಪತ್ತಿಯಿಂದಲೂ ಅರ್ಥೈಸುತ್ತಾರೆ. ಯಾವ ಸಾಧನಗಳಿಂದ ಆತ್ಯಂತಿಕತತ್ತ್ವದ ಸಾಕ್ಷಾತ್ಕಾರವಾಗುವುದೋ ಅಂತಹ ಸಾಧನಗಳು 'ದರ್ಶನ' ಎಂಬುದು ಕರಣವ್ಯುತ್ಪತ್ತಿಯ ಅರ್ಥ. ಈ ಸಾಧನಗಳಿಂದ ನೋಡಲ್ಪಡುವ ಆತ್ಯಂತಿಕತತ್ತ್ವವೇ 'ದರ್ಶನ' ಎನ್ನುವುದು ಭಾವವ್ಯುತ್ಪತ್ತಿಯ ಅರ್ಥ.

ದರ್ಶನವು ಶಾಸ್ತ್ರ ಎಂದು ಪರಿಗಣಿತವಾಗಿದೆ. ಶಾಸ್ತ್ರವೆಂಬ ಶಬ್ದವು शास् 'ಆಜ್ಞಾಪಿಸು' ಮತ್ತು शंस् 'ವರ್ಣಿಸು' ಅಥವಾ 'ಪ್ರಕಟಿಸು' ಎಂಬ ಎರಡು ಧಾತುಗಳಿಂದ ನಿಷ್ಪನ್ನವಾಗಿದೆ. ಮನುಷ್ಯನ ಕರ್ತವ್ಯ-ಅಕರ್ತವ್ಯಗಳನ್ನು ವಿಧಿ ಮತ್ತು ನಿಷೇಧಗಳ ಮೂಲಕ ಆಜ್ಞಾಪಿಸುವ 'ಶಾಸನ' ಎಂಬ ಅರ್ಥದಲ್ಲಿ 'ಶಾಸ್ತ್ರ' ಶಬ್ದವು ಧರ್ಮಶಾಸ್ತ್ರಗಳಿಗೆ ಅನ್ವಯಿಸುತ್ತದೆ.

# ಭೂಮಿಕೆ

### ದರ್ಶನದ ಉಗಮ

"ವಿಶ್ವ ಎಂಬುದು ಮೊದಲ ಮತ್ತು ಕೊನೆಯ ಪುಟಗಳನ್ನು ಕಳೆದುಕೊಂಡ ಒಂದು ಪುಸ್ತಕದಂತೆ". ಪರ್ಷಿಯಾದೇಶದ ಕವಿಯೊಬ್ಬನ ಈ ಉದ್ಗಾರದಲ್ಲಿ ಪ್ರಪಂಚದ ಸಮಸ್ತ ಅನ್ವೇಷಣೆಗಳ ಮೂಲಪ್ರಚೋದನೆಯ ಚಿತ್ರಣವಿದೆ. ಭೌತಿಕನೆಲೆಯಲ್ಲಿ ದೈಹಿಕ ಅಗತ್ಯಗಳಿಗೆ ಮಾತ್ರ ಸೀಮಿತವಾಗಿದ್ದ ಆದಿಮಾನವನ ಜೀವನ ಸುತ್ತಲಿನ ಪ್ರಕೃತಿಯ ವೈಚಿತ್ರ್ಯ ವೈಪರೀತ್ಯಗಳಿಂದ ಕ್ಷುಬ್ಧವಾದಾಗ ಸುಪ್ತವಾಗಿದ್ದ ಅವನ ಚಿತ್ತ ಜಾಗರಿತವಾಗಿ 'ಏನು'? 'ಏಕೆ'? 'ಹೇಗೆ'? ಎಂದೆಲ್ಲ ಪ್ರಶ್ನಿಸಲಾರಂಭಿಸಿತು. ವಿಶ್ವಪುಸ್ತಕದ ಕಳೆದುಹೋದ ಪುಟಗಳ ಈ ಅನ್ವೇಷಣೆ ಎರಡು ದಿಕ್ಕುಗಳಲ್ಲಿ ಸಾಗಿತು. ಒಂದು ದಿಕ್ಕು ಪ್ರಕೃತಿಯ ಶಕ್ತಿಗಳನ್ನು ಶ್ರದ್ಧಾಮೂಲಭಾವನೆಯಿಂದ ಅರ್ಥೈಸಹೊರಟು ಪುರಾಣ(Mythology)ವಾದರೆ ಇನ್ನೊಂದು ಬೌದ್ಧಿಕವಾಗಿ ವಿಶ್ಲೇಷಿಸುತ್ತ 'ದರ್ಶನ'ದ ಉಗಮಕ್ಕೆ ಕಾರಣವಾಯಿತು.

ಈ ದೃಶ್ಯಪ್ರಪಂಚ ಯಾವೆಲ್ಲ ಮೂಲ ಅಂಶಗಳಿಂದ ಉತ್ಪನ್ನವಾಗಿದೆ? ಆ ಮೂಲ ಅಂಶಗಳ ಸ್ವರೂಪವೇನು? ಆ ಸ್ವರೂಪವೇ ಪ್ರಪಂಚದ ನೈಜಸ್ವರೂಪವೆ? ನಾಮ ರೂಪಾತ್ಮಕವಾದ ಈ ಪ್ರಪಂಚಕ್ಕೆ ಕಾರಣವೇನು? ಇದರ ಕರ್ತೃ ಯಾರು? 'ನಾನು' ಎಂಬುದರ ಸ್ವರೂಪವೇನು? 'ನನ್ನ' ಆತ್ಯಂತಿಕ ಉದ್ದೇಶವೇನು? 'ನನಗೆ' ಮರಣಾನಂತರ ಅಸ್ತಿತ್ವವಿದೆಯೆ? ಮರಣ-ಜನನಗಳ ಈ ನಿರಂತರ ಆವರ್ತನೆಯಿಂದ ಬಿಡುಗಡೆ ಇದೆಯೆ? ಇಂತಹ ಪ್ರಶ್ನೆಗಳಿಗೆ ಪರಿಹಾರದ ಅನ್ವೇಷಣೆಯ 'ಮಾರ್ಗ' ಹಾಗೂ ಕಂಡುಕೊಂಡ 'ಪರಿಹಾರ' ಇವೆರಡಕ್ಕೂ 'ದರ್ಶನ' ಎಂಬ ಪದ ಅನ್ವಯಿಸುತ್ತದೆ.

### ದರ್ಶನದ ಅರ್ಥ

'ದರ್ಶನ' ಎಂಬ ಪದವನ್ನು ದृश्यते अनेन इति ಎಂಬ ಕರಣವ್ಯುತ್ಪತ್ತಿಯಿಂದಲೂ दर्शनं-दृष्टिः इति ಎಂಬ ಭಾವವ್ಯುತ್ಪತ್ತಿಯಿಂದಲೂ ಅರ್ಥೈಸುತ್ತಾರೆ. ಯಾವ ಸಾಧನಗಳಿಂದ ಆತ್ಯಂತಿಕತತ್ತ್ವದ ಸಾಕ್ಷಾತ್ಕಾರವಾಗುವುದೋ ಅಂತಹ ಸಾಧನಗಳು 'ದರ್ಶನ' ಎಂಬುದು ಕರಣವ್ಯುತ್ಪತ್ತಿಯ ಅರ್ಥ. ಈ ಸಾಧನಗಳಿಂದ ನೋಡಲ್ಪಡುವ ಆತ್ಯಂತಿಕತತ್ತ್ವವೇ 'ದರ್ಶನ' ಎನ್ನುವುದು ಭಾವವ್ಯುತ್ಪತ್ತಿಯ ಅರ್ಥ.

ದರ್ಶನವು ಶಾಸ್ತ್ರ ಎಂದು ಪರಿಗಣಿತವಾಗಿದೆ. ಶಾಸ್ತ್ರವೆಂಬ ಶಬ್ದವು शास् 'ಆಜ್ಞಾಪಿಸು' ಮತ್ತು शंस् 'ವರ್ಣಿಸು' ಅಥವಾ 'ಪ್ರಕಟಿಸು' ಎಂಬ ಎರಡು ಧಾತುಗಳಿಂದ ನಿಷ್ಪನ್ನವಾಗಿದೆ. ಮನುಷ್ಯನ ಕರ್ತವ್ಯ-ಅಕರ್ತವ್ಯಗಳನ್ನು ವಿಧಿ ಮತ್ತು ನಿಷೇಧಗಳ ಮೂಲಕ ಆಜ್ಞಾಪಿಸುವ 'ಶಾಸನ' ಎಂಬ ಅರ್ಥದಲ್ಲಿ 'ಶಾಸ್ತ್ರ' ಶಬ್ದವು ಧರ್ಮಶಾಸ್ತ್ರಗಳಿಗೆ ಅನ್ವಯಿಸುತ್ತದೆ.

ಆತ್ಯಂತಿಕತತ್ತ್ವವನ್ನು ವರ್ಣಿಸುವ ಅಥವಾ ಪ್ರಕಟಿಸುವ 'ಶಂಸಕ' ಎಂಬ ಅರ್ಥದಲ್ಲಿ ದರ್ಶನವು 'ಶಾಸ್ತ್ರ' ಎಂದು ಕರೆಯಲ್ಪಡುತ್ತದೆ. ಇವುಗಳಲ್ಲಿ ಶಾಸನಶಾಸ್ತ್ರವಾದ ಧರ್ಮಶಾಸ್ತ್ರವು ಕ್ರಿಯಾಪ್ರೇರಕವಾದರೆ ಶಾಸಕಶಾಸ್ತ್ರವಾದ ದರ್ಶನವು ಜ್ಞಾನಪ್ರೇರಕವಾಗಿದೆ.

ದರ್ಶನಪ್ರಕಾರಗಳು

ದರ್ಶನಗಳನ್ನು ಮೂಲತಃ 'ಆಸ್ತಿಕ' ಮತ್ತು 'ನಾಸ್ತಿಕ' ಎಂದು ದ್ವಿವಿಧವಾಗಿ ವಿಂಗಡಿಸಲಾಗಿದೆ. ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಪೂರ್ವಮೀಮಾಂಸಾ ಮತ್ತು ಉತ್ತರಮೀಮಾಂಸಾ(ವೇದಾಂತ) ಇವು ಆಸ್ತಿಕದರ್ಶನಗಳು. ಇವುಗಳನ್ನೇ 'ಷಡ್‌ದರ್ಶನ' ಗಳೆಂದು ಕರೆಯುತ್ತಾರೆ. ಚಾರ್ವಾಕ, ಬೌದ್ಧ ಮತ್ತು ಜೈನದರ್ಶನಗಳು ನಾಸ್ತಿಕದರ್ಶನಗಳು ಎಂದು ಪರಿಗಣಿಸಲ್ಪಡುತ್ತವೆ.

ದರ್ಶನಗಳಲ್ಲಿ ಆಸ್ತಿಕ ಮತ್ತು ನಾಸ್ತಿಕ ಎಂಬ ವಿಂಗಡಣೆಗೆ ಮೂರು ಮಾನದಂಡಗಳಿವೆ:

1. ದೃಶ್ಯಪ್ರಪಂಚಕ್ಕೆ ಅತೀತವಾದ ಸತ್ಯದ ನಿರಾಕರಣೆ. ಈ ದೃಷ್ಟಿಯಲ್ಲಿ ಚಾರ್ವಾಕದರ್ಶನ ಮಾತ್ರ ನಾಸ್ತಿಕದರ್ಶನವೆಂಬ ಅಭಿಧಾನಕ್ಕೆ ಅರ್ಹವಾಗುತ್ತದೆ.
2. ಈಶ್ವರನ ಅಸ್ತಿತ್ವದ ನಿರಾಕರಣೆ. ಈ ಮಾನದಂಡದ ಪ್ರಕಾರ ಚಾರ್ವಾಕ, ಸಾಂಖ್ಯ ಮತ್ತು ಪೂರ್ವಮೀಮಾಂಸಾದರ್ಶನಗಳನ್ನು ನಾಸ್ತಿಕದರ್ಶನಗಳೆನ್ನಬೇಕಾಗುತ್ತದೆ.
3. ವೇದಪ್ರಾಮಾಣ್ಯವನ್ನು ಅಂಗೀಕರಿಸುವಿಕೆ. ವೇದೋಕ್ತವಾದುದೆಲ್ಲವೂ ಪ್ರಮಾಣ ಎಂದು ಅಂಗೀಕರಿಸುವ ಷಡ್ದರ್ಶನಗಳು ಆಸ್ತಿಕದರ್ಶನಗಳೆಂದೂ, ವೇದಗಳ ಪ್ರಾಮಾಣ್ಯವನ್ನು ನಿರಾಕರಿಸುವ ಚಾರ್ವಾಕ, ಬೌದ್ಧ ಮತ್ತು ಜೈನದರ್ಶನಗಳನ್ನು ನಾಸ್ತಿಕದರ್ಶನಗಳೆಂದೂ ವ್ಯವಹರಿಸುತ್ತಾರೆ. ಆಸ್ತಿಕ ಮತ್ತು ನಾಸ್ತಿಕ ಎಂಬ ಪೃಥಕ್ಕರಣಕ್ಕೆ ವೇದಪ್ರಾಮಾಣ್ಯದ ಮಾನದಂಡವನ್ನು ಅಂಗೀಕರಿಸಿ ಇವುಗಳನ್ನೇ ವೈದಿಕ ಮತ್ತು ಅವೈದಿಕದರ್ಶನಗಳೆಂದೂ ವ್ಯವಹರಿಸಲಾಗುತ್ತದೆ.

## ದರ್ಶನಗಳ ಸ್ಥೂಲಪರಿಚಯ

ಚಾರ್ವಾಕದರ್ಶನ

'ಮನಸೆಳೆಯುವಂತೆ ಆಕರ್ಷಕವಾಗಿ ವಾದಿಸುವವನು' ಚಾರುವಾಕ್ ಎಂದು ಅನ್ವರ್ಥ ಅಭಿಧಾನವನ್ನು ಹೊಂದಿದ ಈ ದರ್ಶನದ ಮೂಲ ಪ್ರವರ್ತಕ ಬೃಹಸ್ಪತಿ ಎಂದು ಪ್ರಸಿದ್ಧಿಯಿದೆ. 'ಲೋಕಾಯತ' ಎಂಬ ಇನ್ನೊಂದು ಹೆಸರನ್ನು ಹೊಂದಿದ ಈ ದರ್ಶನದ ಪ್ರಕಾರ ಪ್ರತ್ಯಕ್ಷವೊಂದೇ ಪ್ರಮಾಣ. ಪೃಥ್ವೀ, ಜಲ, ತೇಜಸ್ ಮತ್ತು ವಾಯು ಎಂಬ ಭೂತಗಳಿಂದ ಪ್ರಪಂಚ ಉತ್ಪನ್ನವಾಗಿದೆ. ಇವುಗಳ ಸಂಯೋಗವಿಶೇಷದಿಂದ ಬುದ್ಧಿ ಮತ್ತು ಚೈತನ್ಯ ಉಂಟಾಗುತ್ತವೆ. ಈ ನಾಲ್ಕು ಭೂತಗಳು ವಿಘಟನೆ ಹೊಂದುವುದೇ ಮರಣ.

ಆಯುರಾರೋಗ್ಯ-ಐಶ್ವರ್ಯಗಳ ಮೂಲಕ ಪಡೆಯುವ ವಿಷಯಸುಖವೇ ಸ್ವರ್ಗ.

ವ್ಯಾಧಿ, ದಾರಿದ್ರ್ಯ ಇತ್ಯಾದಿ ಉಪದ್ರವಗಳು ಉಂಟುಮಾಡುವ ಅಹಿತಕರ ಅನುಭವವೇ ನರಕ. ದೇವರು, ಪಾಪ-ಪುಣ್ಯಗಳೆಲ್ಲ ಕೇವಲ ಭ್ರಮೆ. ಭೌತಿಕಜೀವನದಲ್ಲಿ ಅರ್ಥ ಮತ್ತು ಕಾಮಗಳೆಂಬ ಪುರುಷಾರ್ಥಗಳನ್ನು ಸಂಪಾದಿಸಿ ಯಾವಜ್ಜೀವವೂ ಭೋಗಗಳನ್ನು ಅನುಭವಿಸುವುದೇ ಜೀವನದ ಪರಮಪ್ರಯೋಜನ. ಆದ್ದರಿಂದಲೇ ಚಾರ್ವಾಕದರ್ಶನವನ್ನು चर्वन्ति (ಭಕ್ಷಿಸುತ್ತಾರೆ) इति चार्वाकाः ಎಂದು ಅರ್ಥೈಸಲಾಗಿದೆ.

### ಬೌದ್ಧದರ್ಶನ

ಇದರ ಪ್ರಕಾರ ವಿಶ್ವವೆಲ್ಲವೂ ಕ್ಷಣಭಂಗುರವಾದುದು. ದುಃಖ, ಆಯತನ, ಸಮುದಯ ಮತ್ತು ಮಾರ್ಗ ಎಂಬ ನಾಲ್ಕು ಆರ್ಯಸತ್ಯಗಳಿವೆ. ವಿಜ್ಞಾನ, ವೇದನಾ, ಸಂಜ್ಞಾ, ಸಂಸ್ಕಾರ ಮತ್ತು ರೂಪ ಇವು ಪಂಚವಿಧ ದುಃಖಗಳು. ಪಂಚ ಜ್ಞಾನೇಂದ್ರಿಯಗಳು, ಪಂಚ ಕರ್ಮೇಂದ್ರಿಯಗಳು, ಮನಸ್ಸು ಮತ್ತು ಬುದ್ಧಿ ಇವು ಹನ್ನೆರಡು 'ಆಯತನ'ಗಳು. ಮನುಷ್ಯನ ಅಂತರ್ಯದಲ್ಲಿ ಯಾವುದರಿಂದ ರಾಗಾದಿಗಳ ಸಮೂಹ ಉತ್ಪನ್ನವಾಗುವುದೋ ಆ 'ನಾನು, ನನ್ನದು' ಎಂಬ ಸ್ವಭಾವವನ್ನೇ 'ಸಮುದಯ' ಎನ್ನುತ್ತಾರೆ. ಎಲ್ಲ ಸಂಸ್ಕಾರಗಳೂ ಕ್ಷಣಿಕ ಎಂಬ ಭಾವವು ಸ್ಥಿರವಾಗಿರುವುದಕ್ಕೆ 'ಮಾರ್ಗ'ಎಂದು ಹೆಸರು. ಇದೇ ಮೋಕ್ಷ.

ಬೌದ್ಧರು ಪ್ರತ್ಯಕ್ಷ ಮತ್ತು ಅನುಮಾನ ಎಂಬ ಎರಡು ಪ್ರಮಾಣಗಳನ್ನು ಅಂಗೀಕರಿಸುತ್ತಾರೆ. ಈ ದರ್ಶನದಲ್ಲಿ ವೈಭಾಷಿಕ, ಸೌತ್ರಾಂತಿಕ, ಯೋಗಾಚಾರ ಮತ್ತು ಮಾಧ್ಯಮಿಕ ಎಂಬ ನಾಲ್ಕು ಪ್ರಭೇದಗಳಿವೆ.

### ಜೈನದರ್ಶನ

ಪ್ರತ್ಯಕ್ಷ, ಅನುಮಾನ ಮತ್ತು ಶಬ್ದಗಳೆಂಬ ಮೂರು ಪ್ರಮಾಣಗಳನ್ನು ಅಂಗೀಕರಿಸುವ ಜೈನದರ್ಶನ 'ಪುದ್ಗಲ' ಎಂಬ ಸೂಕ್ಷ್ಮವಾದ ಮೂಲಧಾತುಗಳಿಂದ ಪೃಥಿವೀ ಮುಂತಾದ ಸ್ಥೂಲಭೂತಗಳು ಉಂಟಾಗಿವೆಯೆಂದು ವಾದಿಸುತ್ತದೆ. ಈಶ್ವರತತ್ತ್ವವನ್ನು ಅಂಗೀಕರಿಸದಿದ್ದರೂ ಚೈತನ್ಯಸ್ವರೂಪಿಯಾದ, ಸಂಕೋಚ-ವಿಕಾಸಸ್ವಭಾವಸಹಿತವಾದ, ನಿತ್ಯವಾದ ಆತ್ಮವನ್ನು ಅಂಗೀಕರಿಸಲಾಗಿದೆ. ಈ ದರ್ಶನದ ಪ್ರಕಾರ ಪೂರ್ಣತೆಯನ್ನು ಪಡೆದ ಜೀವಾತ್ಮನೇ 'ಅರ್ಹತ'. ಜನ್ಮಾಂತರವನ್ನು ಅಂಗೀಕರಿಸುವ ಜೈನರು ಜೀವಾತ್ಮನ ಕರ್ಮಪುದ್ಗಲಗಳು ನಾಶ ಹೊಂದಿದ ಬಳಿಕ ನಿಸ್ಸಂಗವಾದ ಆತ್ಮ ಅನಂತಾಕಾಶದಲ್ಲಿ ಸತತವೂ ಊರ್ಧ್ವಗಾಮಿಯಾಗಿರುವುದನ್ನೇ 'ಮೋಕ್ಷ' ಎನ್ನುತ್ತಾರೆ.

### ಸಾಂಖ್ಯದರ್ಶನ

ಕಪಿಲಮಹರ್ಷಿಯಿಂದ ಪ್ರವರ್ತಿತವಾದ ಈ ದರ್ಶನವು 'ಸಂಖ್ಯಾ'ಪ್ರಾಧಾನ್ಯದಿಂದ ಸಾಂಖ್ಯವೆಂಬ ಹೆಸರನ್ನು ಹೊಂದಿದೆ. "ಸಂಖ್ಯಾ" ಎಂಬ ಪದಕ್ಕೆ 'ಏಕತ್ವದ್ವಿತ್ವಾದಿ ಸಂಖ್ಯೆಗಳು' ಮತ್ತು 'ವಿವೇಕಜ್ಞಾನ' ಎಂಬ ಅರ್ಥದ್ವಯವಿದೆ. ಈ ಅರ್ಥದ್ವಯದಲ್ಲಿಯೂ ಇದು ಸಾಂಖ್ಯವೆಂಬ ಅನ್ವರ್ಥ ಅಭಿಧಾನವನ್ನು ಹೊಂದಿದೆ.

ಪ್ರತ್ಯಕ್ಷ, ಅನುಮಾನ ಮತ್ತು ಶಬ್ದ ಎಂಬ ಪ್ರಮಾಣತ್ರಯವನ್ನು ಅಂಗೀಕರಿಸುವ ಈ ದರ್ಶನದಲ್ಲಿ 25 ತತ್ತ್ವಗಳನ್ನು ನಿರೂಪಿಸಲಾಗಿದೆ. ಪ್ರಕೃತಿ, ಮಹತ್, ಅಹಂಕಾರ, ರೂಪರಸಗಂಧಸ್ಪರ್ಶಶಬ್ದಗಳೆಂಬ ಪಂಚತನ್ಮಾತ್ರಗಳು, ಪಂಚಕರ್ಮೇಂದ್ರಿಯಗಳು, ಪಂಚ ಜ್ಞಾನೇಂದ್ರಿಯಗಳು, ಪಂಚಭೂತಗಳು, ಮನಸ್ ಮತ್ತು ಪುರುಷ ಇವು 25 ತತ್ತ್ವಗಳು, ಇವುಗಳಲ್ಲಿ ಕೆಲವು ಕೇವಲ ಪ್ರಕೃತಿಗಳು, ಕೆಲವು ಪ್ರಕೃತಿ ವಿಕೃತಿಗಳು, ಕೆಲವು ಕೇವಲ ವಿಕೃತಿಗಳು, ಇನ್ನು ಕೆಲವು ಪ್ರಕೃತಿ-ವಿಕೃತಿ ಅಲ್ಲದವುಗಳು ಎಂದು ಚತುರ್ವಿಧವಾಗಿ ವಿಂಗಡಿಸಿ ನಾಲ್ಕು ಪದಾರ್ಥಗಳಾಗಿ ಅಂಗೀಕರಿಸಲಾಗಿದೆ.

ಜಡವಾಗಿದ್ದರೂ ಕ್ರಿಯಾತ್ಮಕವಾದ, ಸತ್ತ್ವರಜಸ್ತಮೋಗುಣಗಳಿಂದ ಕೂಡಿದ ಪ್ರಕೃತಿಯೇ ಜಗತ್ತಿಗೆ ಕಾರಣವೇ ಹೊರತು ಈಶ್ವರನಲ್ಲ. ಪ್ರಕೃತಿ-ಪುರುಷ ವಿವೇಕಜ್ಞಾನವೇ ಮೋಕ್ಷ ಎಂಬುದು ಸಾಂಖ್ಯರ ಸಿದ್ಧಾಂತ.

**ಯೋಗದರ್ಶನ**

युज - समाधौ ಎಂಬ ಧಾತುವಿನಿಂದ 'ಯೋಗ'ವೆಂಬ ಶಬ್ದವು ನಿಷ್ಪನ್ನವಾಗಿದೆ. ಈ ದರ್ಶನವು ಸಾಂಖ್ಯದರ್ಶನದ 25 ತತ್ತ್ವಗಳ ಜೊತೆ ಈಶ್ವರ ಎಂಬ 26ನೆಯ ತತ್ತ್ವವನ್ನು ಅಂಗೀಕರಿಸುವುದರಿಂದ 'ಸೇಶ್ವರಸಾಂಖ್ಯ' ಎಂದೂ ಕರೆಯಲ್ಪಡುತ್ತದೆ. ಪತಂಜಲಿ ಮಹರ್ಷಿಯಿಂದ ಪ್ರವರ್ತಿತವಾದ ಈ ದರ್ಶನವು ಪ್ರತ್ಯಕ್ಷ, ಅನುಮಾನ ಮತ್ತು ಶಬ್ದಗಳೆಂಬ ಪ್ರಮಾಣತ್ರಯವನ್ನು ಅಂಗೀಕರಿಸುತ್ತದೆ.

ಪ್ರಮಾಣ, ವಿಪರ್ಯಯ, ವಿಕಲ್ಪ, ನಿದ್ರಾ ಮತ್ತು ಸ್ಮೃತಿ ಎಂಬ ಪಂಚವಿಧ ಚಿತ್ತವೃತ್ತಿಗಳನ್ನು ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ ಮತ್ತು ಸಮಾಧಿಗಳೆಂಬ ಅಷ್ಟಾಂಗಯೋಗಾನುಷ್ಠಾನದಿಂದ ತಡೆಯುವುದೇ ಯೋಗದರ್ಶನದ ತತ್ತ್ವಾರ್ಥ (योग: चित्तवृत्तिनिरोध:). ಯೋಗಾನುಷ್ಠಾನದಿಂದ ಪ್ರಕೃತಿ-ಪುರುಷವಿವೇಕಜ್ಞಾನ ಉದಯಿಸಿದ ಬಳಿಕ ಅವಿದ್ಯಾ, ಅಸ್ಮಿತಾ, ರಾಗ, ದ್ವೇಷ, ಅಭಿನಿವೇಶ ಎಂಬ ಪಂಚಕ್ಲೇಶಗಳು ನಾಶವಾಗುತ್ತವೆ. ಇದರಿಂದ ಪುಣ್ಯ-ಪಾಪರೂಪಿಕರ್ಮಾಶಯ ನಾಶವಾಗುತ್ತದೆ. ತನ್ಮೂಲಕ ಮೋಕ್ಷಪ್ರಾಪ್ತಿ. ಹೀಗೆ ಸಹಜವಾದ ಶುದ್ಧಚೈತನ್ಯದಲ್ಲಿ ಪುರುಷನ ಅಸ್ತಿತ್ವವೇ ಕೇವಲಾವಸ್ಥೆ. ಪುರುಷನ ಪ್ರವೃತ್ತಿಗೆ ಕಾರಣವಾದ ಪುರುಷಾರ್ಥಗಳು ಶೂನ್ಯವಾದಾಗ ಗುಣಗಳು ತಮ್ಮ ಕಾರಣದಲ್ಲಿ ಲಯವಾಗುತ್ತವೆ. ಇದೇ ಕೈವಲ್ಯ.

ಯೋಗದರ್ಶನವು ಸಾಂಖ್ಯದರ್ಶನದಂತೆ ಪ್ರಪಂಚದ ಬಾಹ್ಯವಿಷಯಗಳ ವಿಶ್ಲೇಷಣೆ ಮತ್ತು ನಿರೂಪಣೆಗೆ ಪ್ರಾಧಾನ್ಯ ನೀಡದೆ ಮನುಷ್ಯನ ಆಂತರಂಗಿಕವ್ಯಾಪಾರವಾದ ಚಿತ್ತವೃತ್ತಿಯ ಸೂಕ್ಷ್ಮನಿರೀಕ್ಷಣೆ ಮತ್ತು ವಿಶ್ಲೇಷಣೆಗಳಲ್ಲಿ ತೊಡಗಿಕೊಂಡು ಬಾಹ್ಯದಿಂದ ಅಂತರಂಗದತ್ತ ಮುನ್ನಡೆದಿದೆ.

## ಪೂರ್ವಮೀಮಾಂಸಾ

ಮಾನುಷಶಕ್ತಿಯ ಪರಿಧಿಯನ್ನು ಮೀರಿದ ನಿಸರ್ಗದ ವೈಚಿತ್ರ್ಯಗಳ ಅಪರಿಮಿತಶಕ್ತಿಗೆ ಕಣ್ಣು ತೆರೆದ ಆದಿಮಮಾನವ ಶ್ರದ್ಧಾಮೂಲಭಾವನೆಯಿಂದ ನಿಸರ್ಗದ ಆಯಾ ತತ್ತ್ವಗಳಿಗೆ ನಾಮರೂಪಾತ್ಮಕವಾದ ಆಕಾರವನ್ನು ಪರಿಕಲ್ಪಿಸಿ ಸ್ತುತಿಸಲು ಆರಂಭಿಸಿದನು. ಕಾಲಕ್ರಮೇಣ ವಾಗ್ರೂಪಿಸ್ತುತಿಯ ಜೊತೆ ವಸ್ತುಸಮರ್ಪಣೆಯ ಯಜ್ಞವಿಧಿ ಆರಂಭವಾಯಿತು. ಇಂತಹ ಯಜ್ಞದ ವಿಧಿ, ವಿಧಾನಗಳ ವಿವರಣೆ ಮತ್ತು ಯಜ್ಞಸಂಬಂಧಿ ವೇದವಾಕ್ಯಗಳ ನಿಷ್ಕೃಷ್ಟವಾದ ಅರ್ಥಜ್ಞಾನ ಒಂದು ದರ್ಶನವಾಗಿ 'ಪೂರ್ವಮೀಮಾಂಸಾ' ಎಂಬ ಹೆಸರು ಪಡೆಯಿತು. ಕರ್ಮವಿವೇಚನೆಯಿಂದ 'ಕರ್ಮಮೀಮಾಂಸಾ' ಎಂಬ ಹೆಸರೂ ಇದಕ್ಕಿದೆ. ಕರ್ಮಕಾಂಡವು ವೇದದ ಪೂರ್ವಭಾಗವಾದುದರಿಂದ ಇದಕ್ಕೆ 'ಪೂರ್ವಮೀಮಾಂಸಾ' ಎಂಬ ಸಾರ್ಥಕ ಹೆಸರಿದೆ.

'ಜೈಮಿನಿ'ಯು ಈ ದರ್ಶನದ ಪ್ರವರ್ತಕನೆಂದು ಪರಿಗಣಿಸಲ್ಪಟ್ಟರೂ ಅವನು ಸೂತ್ರಕಾರನೇ ಹೊರತು ಪ್ರವರ್ತಕನಲ್ಲ. ಕಾಲಕ್ರಮೇಣ ಪೂರ್ವಮೀಮಾಂಸೆಯಲ್ಲಿ ಪ್ರಧಾನವಾಗಿ ಮತದ್ವಯವು ಬೆಳೆದುಬಂದಿತು. ಕುಮಾರಿಲಭಟ್ಟನಿಂದ ಪ್ರವರ್ತಿತವಾದ ಮತಕ್ಕೆ 'ಭಾಟ್ಟಮತ' ಎಂದೂ, ಕುಮಾರಿಲನ ಶಿಷ್ಯನಾದ ಪ್ರಭಾಕರನಿಂದ ಸ್ಥಾಪಿತವಾದ ಮತಕ್ಕೆ 'ಪ್ರಾಭಾಕರಮತ' ಅಥವಾ 'ಗುರುಮತ' ಎಂದೂ ಹೆಸರಿದೆ.

ಮೀಮಾಂಸಕರು ಸಾಮಾನ್ಯವಾಗಿ ಪ್ರತ್ಯಕ್ಷ, ಅನುಮಾನ, ಉಪಮಾನ, ಶಬ್ದ, ಅರ್ಥಾಪತ್ತಿ ಮತ್ತು ಅನುಪಲಬ್ಧಿಗಳೆಂಬ ಆರು ಪ್ರಮಾಣಗಳನ್ನು ಅಂಗೀಕರಿಸುತ್ತಾರೆ. ದ್ರವ್ಯ, ಗುಣ, ಕರ್ಮ, ಸಾಮಾನ್ಯ, ಸಮವಾಯ, ಶಕ್ತಿ, ಸಾದೃಶ್ಯ, ಸಂಖ್ಯಾ ಎಂದು ಅಷ್ಟಪದಾರ್ಥಗಳನ್ನು ಅಂಗೀಕರಿಸುವ ಅವರು ಪ್ರಪಂಚದೊಡನೆ ಆತ್ಮದ ಸಂಬಂಧನಾಶವೇ ಮೋಕ್ಷ ಎನ್ನುತ್ತಾರೆ. ಇಂತಹ ಸಂಬಂಧನಾಶಕ್ಕೆ ಕಾಮ್ಯ ಮತ್ತು ನಿಷಿದ್ಧಕರ್ಮಗಳಿಂದ ನಿವೃತ್ತಿಯೂ, ನಿತ್ಯಕರ್ಮಗಳಲ್ಲಿ ಪ್ರವೃತ್ತಿಯೂ ಸಾಧಕವಾಗುತ್ತದೆ. ಪೂರ್ವಮೀಮಾಂಸಕರು ಆರಂಭದಲ್ಲಿ ಈಶ್ವರನನ್ನು ಅಂಗೀಕರಿಸಿರಲಿಲ್ಲ. ಆದರೆ ಜೈಮಿನಿಯ ಉತ್ತರಕಾಲೀನ ಮೀಮಾಂಸಕರು 'ಕರ್ಮಗಳ ದಾತೃ' ಎಂದು ಈಶ್ವರತತ್ತ್ವವನ್ನು ಅಂಗೀಕರಿಸುತ್ತಾರೆ.

## ಉತ್ತರಮೀಮಾಂಸಾ (ವೇದಾಂತ)

ವೇದಗಳ ಆರಂಭದಲ್ಲಿ ಕರ್ಮದ ಬಗೆಗೆ ಒಲವನ್ನು ಕಂಡರೆ ಅಂತಿಮ ಭಾಗಗಳಲ್ಲಿ ಜ್ಞಾನದತ್ತ ಒಲವನ್ನು ಗುರುತಿಸಬಹುದು. ವೇದಗಳ ಕೊನೆಯ ನಾಸದೀಯ, ಪುರುಷ ಮುಂತಾದ ಸೂಕ್ತಗಳಲ್ಲಿ ಮತ್ತು ಉಪನಿಷತ್ತುಗಳಲ್ಲಿ ಮುಖ್ಯವಾಗಿ ಜಗತ್ತು-ಜೀವ-ಬ್ರಹ್ಮಗಳ ಚಿಂತನೆ ಮತ್ತು ಪರಿಭಾವನೆಯ ವಿಧಾನಗಳನ್ನು ಕಾಣುತ್ತೇವೆ. 'ವೇದಾಂತ' ಎಂದು ಪರಿಗಣಿತವಾದ ಉಪನಿಷತ್ತುಗಳಲ್ಲಿ ಪ್ರಧಾನವಾಗಿ ಎರಡು ಒಲವುಗಳನ್ನು ಗಮನಿಸುತ್ತೇವೆ. ಒಂದು ಜಗತ್ತು ಜೀವ ಬ್ರಹ್ಮಗಳ ಐಕ್ಯದೆಡೆಗೆ; ಇನ್ನೊಂದು ಇವುಗಳ ಭೇದದೆಡೆಗೆ. ಇಂತಹ ವಿರುದ್ಧವಾದ ಒಲವುಗಳನ್ನು ಸಮನ್ವಯಗೊಳಿಸುವ ಪ್ರಯತ್ನವೇ ಉತ್ತರಮೀಮಾಂಸಾ ಅಥವಾ

ವೇದಾಂತದರ್ಶನ. ಇದಕ್ಕೆ 'ಶಾರೀರಕಮೀಮಾಂಸಾ' ಎಂಬ ನಾಮಾಂತರವೂ ಇದೆ. ಬಾದರಾಯಣಮಹರ್ಷಿಯಿಂದ ಪ್ರಣೀತವಾದ 'ಬ್ರಹ್ಮಸೂತ್ರ' ಎಂಬ ಸೂತ್ರಸಮುಚ್ಚಯ ವೇದಾಂತದರ್ಶನದ ಪ್ರಸ್ಥಾನಗ್ರಂಥವೆಂದು ಪರಿಗಣಿಸಲ್ಪಟ್ಟಿದೆ. ಈ ಸೂತ್ರಗಳಿಗೆ ಶಂಕರ, ಮಧ್ವ ಮತ್ತು ರಾಮಾನುಜ ಎಂಬ ಆಚಾರ್ಯತ್ರಯರ ಭಾಷ್ಯಗಳು ವೇದಾಂತದರ್ಶನದ ಮೂರು ಸಿದ್ಧಾಂತಗಳಾಗಿ ಪ್ರಸಿದ್ಧವಾಗಿವೆ. ಈ ಆಚಾರ್ಯರ ಸಿದ್ಧಾಂತಗಳನ್ನು ಕ್ರಮವಾಗಿ ಅದ್ವೈತ, ದ್ವೈತ ಮತ್ತು ವಿಶಿಷ್ಟಾದ್ವೈತಸಿದ್ಧಾಂತಗಳೆಂದು ನಿರ್ದೇಶಿಸುತ್ತಾರೆ.

ವೇದಾಂತದರ್ಶನವು ನಿರ್ಗುಣವೂ ನಿರಾಕಾರವೂ ಸತ್-ಚಿತ್-ಆನಂದಸ್ವರೂಪವೂ ಆದ ಬ್ರಹ್ಮ ಎಂಬ ಆತ್ಯಂತಿಕ ಸತ್ಯವನ್ನು ಅಂಗೀಕರಿಸುತ್ತದೆ. ಈ ಬ್ರಹ್ಮವೇ 'ಮಾಯಾ' ಎಂಬುದರಿಂದ ಆವೃತವಾದಾಗ 'ಹಿರಣ್ಯಗರ್ಭ'(ಈಶ್ವರ) ಎಂದು ಹೆಸರಿಸಲ್ಪಡುತ್ತದೆ. 'ಮಾಯಾ' ಎಂದರೆ ತ್ರಿಗುಣಾತ್ಮಕವೂ ಜ್ಞಾನವಿರೋಧಿಯೂ ಸತ್-ಅಸತ್ ವ್ಯತಿರಿಕ್ತವೂ ಅನಾದಿಯೂ ಮತ್ತು ಅನಿರ್ವಚನೀಯವೂ ಆದ ಪದಾರ್ಥ. ಮಾಯಾಸಹಿತನಾದ ಈಶ್ವರನಿಂದಲೇ ಸೃಷ್ಟಿ. ಈ ಸೃಷ್ಟಿಯು ಪಾರಮಾರ್ಥಿಕಸತ್ಯವಾದ ಬ್ರಹ್ಮದ 'ವಿವರ್ತ' ಎಂದರೆ ಪ್ರಾತಿಭಾಸಿಕಸತ್ಯ ಮಾತ್ರ. ನಿರಂತರಪರಿವರ್ತನಶೀಲವಾದ ಈ ಸೃಷ್ಟಿಯು ಸತ್ಯವೆಂದು ಜೀವನು ಭಾವಿಸುವುದಕ್ಕೆ ಕಾರಣವಾದುದೇ 'ಅಧ್ಯಾಸ'. ಈ ಅಧ್ಯಾಸಕಾರಣವಾದ 'ಅವಿದ್ಯೆ' ಅಥವಾ ಮಾಯೆಯನ್ನು ಭೇದಿಸಿದಾಗ ಜೀವ-ಬ್ರಹ್ಮರ ಅಭೇದವುಂಟಾಗುತ್ತದೆ. ಇದು ಅದ್ವೈತದರ್ಶನದ ಸಿದ್ಧಾಂತ.

ವೈಶೇಷಿಕದರ್ಶನ

'ವಿಶೇಷ' ಎಂಬ ಪದಾರ್ಥಕ್ಕೆ ಪ್ರಾಧಾನ್ಯನೀಡುವ ವೈಶೇಷಿಕದರ್ಶನದ ಪ್ರವರ್ತಕ 'ಕಣಾದ'. ಅವನು 'ಉಲೂಕ' ಎಂಬವನ ಮಗನಾದ್ದರಿಂದ ಕಣಾದದರ್ಶನಕ್ಕೆ 'ಔಲೂಕ್ಯದರ್ಶನ' ಎಂಬ ನಾಮಾಂತರವೂ ಇದೆ.

ಪ್ರಪಂಚವೆಲ್ಲವೂ ನಿರಂತರಪರಿವರ್ತನಶೀಲವಾದ ಮಾನಸಿಕಭಾವನೆಗಳ ಪರಿಣಾಮ ಎಂಬ ಬೌದ್ಧದರ್ಶನದ ವಿಜ್ಞಾನವಾದಕ್ಕೆ ಪ್ರತಿಯಾಗಿ ರೂಪುಗೊಂಡ ವೈಶೇಷಿಕದರ್ಶನದಲ್ಲಿ ದೃಶ್ಯಪ್ರಪಂಚದ ಸ್ಥಾಯಿಯಾದ ಅಸ್ತಿತ್ವವನ್ನು ಅಂಗೀಕರಿಸಲಾಗುತ್ತದೆ. ಬಾಹ್ಯಪ್ರಪಂಚದ ವೈವಿಧ್ಯಗಳಿಗೆ ಅಣುಗಳು ಆಧಾರವಾಗಿರುವಂತೆ ಆಧ್ಯಾತ್ಮಪ್ರಪಂಚದ ಅನುಭವವೈವಿಧ್ಯಗಳಿಗೆ ಆಧಾರವಾದವು ಆತ್ಮಗಳು. ಸತ್ಯ ಅಥವಾ ಅಸ್ತಿತ್ವವು ಏಕವಲ್ಲ; ಅನೇಕ. ಆದ್ದರಿಂದ ಈ ದರ್ಶನಕ್ಕೆ 'ಅನೇಕತಾವಾಸ್ತವವಾದ' ಎಂಬ ಹೆಸರೂ ಇದೆ.

ಹೀಗೆ ಅನೇಕಸತ್ಯದ ಅಂತಿಮವಿಶೇಷಗಳನ್ನು ಅನ್ವೇಷಿಸಲು ವೈಶೇಷಿಕರು ವಿಭಜನೆಯ ವಿಧಾನವನ್ನು ಅನುಸರಿಸುತ್ತಾರೆ. ದೃಶ್ಯಪ್ರಪಂಚದ ನಾಮರೂಪಾತ್ಮಕವಾದ ಸ್ಥೂಲದ್ರವ್ಯಗಳು ಅನೇಕ ವಿಭಿನ್ನವಸ್ತುಗಳ ಸಂಯೋಜನೆಯಿಂದ ರೂಪುಗೊಂಡಿವೆ. ವಿಭಜಿಸಬಹುದಾದ ಈ ಸಂಯುಕ್ತವಸ್ತುಗಳನ್ನು ವಿಭಜಿಸಲಾಗದ ಅಂತಿಮಸ್ಥಿತಿಯವರೆಗೂ ವಿಭಜಿಸುತ್ತ ಹೋಗುವುದೇ ವೈಶೇಷಿಕದರ್ಶನದ ತಾತ್ತ್ವಿಕವಿಧಾನ. ಇಂತಹ ವಿಧಾನದಿಂದ ಎಲ್ಲ ಸತ್ಯಗಳೂ ಏಳು

ಅಂತಿಮಪದಾರ್ಥಗಳಿಂದ ರೂಪಿತವಾಗಿವೆಯೆಂದು ಇವರು ಪ್ರತಿಪಾದಿಸುತ್ತಾರೆ. ಈ ದರ್ಶನದ ಪ್ರವರ್ತಕನಾದ ಕಣಾದನ ವೈಶೇಷಿಕಸೂತ್ರಗಳಲ್ಲಿ 'ಈಶ್ವರ'ತತ್ತ್ವದ ಪ್ರತಿಪಾದನೆಯಿಲ್ಲ. ಬದಲಾಗಿ ಅಣು ಮತ್ತು ಆತ್ಮ ಗಳ ಕ್ರಿಯೆಗಳಿಗೆ ಅದೃಷ್ಟವೇ ಕಾರಣವೆನ್ನಲಾಗಿದೆ. ಆದರೆ ಕಣಾದನ ಅನುಯಾಯಿಗಳು ಅದೃಷ್ಟತತ್ತ್ವಕ್ಕೆ ಆಶ್ರಯವಾಗಿ ಈಶ್ವರತತ್ತ್ವವನ್ನು ಕಲ್ಪಿಸಿದರು. ಪ್ರತ್ಯಕ್ಷ ಮತ್ತು ಅನುಮಾನ ಎಂಬ ಪ್ರಮಾಣದ್ವಯವನ್ನು ಅಂಗೀಕರಿಸುವ ಈ ದರ್ಶನದಲ್ಲಿ ತತ್ತ್ವಜ್ಞಾನದಿಂದ ಆತ್ಯಂತಿಕದುಃಖದ ನಿವೃತ್ತಿಯಾಗಿ ತನ್ಮೂಲಕ ಅಪವರ್ಗ(ಮೋಕ್ಷ) ಪ್ರಾಪ್ತವಾಗುತ್ತದೆ ಎಂದು ಪ್ರತಿಪಾದಿಸಲಾಗಿದೆ.

ನ್ಯಾಯದರ್ಶನ

ಗೌತಮ(ಅಕ್ಷಪಾದ)ಮಹರ್ಷಿಯಿಂದ ಸ್ಥಾಪಿತವಾದ ನ್ಯಾಯದರ್ಶನದಲ್ಲಿ ಆತ್ಮಾನಾತ್ಮ ವಿವೇಕಕ್ಕೆ ಅನುಗುಣವಾಗಿ ಪ್ರಮಾಣ, ಪ್ರಮೇಯ, ಸಂಶಯ, ಪ್ರಯೋಜನ, ದೃಷ್ಟಾಂತ, ಸಿದ್ಧಾಂತ, ಅವಯವ, ತರ್ಕ, ನಿರ್ಣಯ, ವಾದ, ಜಲ್ಪ, ವಿತಂಡಾ, ಹೇತ್ವಾಭಾಸ, ಛಲ, ಜಾತಿ ಮತ್ತು ನಿಗ್ರಹಸ್ಥಾನ ಎಂದು ಹದಿನಾರು ಪದಾರ್ಥಗಳನ್ನು ನಿರೂಪಿಸಲಾಗಿದೆ. ಈ ಪದಾರ್ಥಗಳನ್ನು ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದಗಳೆಂಬ ನಾಲ್ಕು ಪ್ರಮಾಣಗಳಿಂದ ಪರೀಕ್ಷಿಸುವ ವಿಧಾನ ಇಲ್ಲಿ ಪ್ರಾಶಸ್ತ್ಯವನ್ನು ಪಡೆದಿದೆ. ಪ್ರಪಂಚದ ಕರ್ತೃವಾಗಿ ಈಶ್ವರತತ್ತ್ವವನ್ನು ಅಂಗೀಕರಿಸಿದ್ದು ಪದಾರ್ಥಗಳ ಸಾಧರ್ಮ್ಯ-ವೈಧರ್ಮ್ಯಜ್ಞಾನದಿಂದ ತತ್ತ್ವಜ್ಞಾನದ ಪ್ರಾಪ್ತಿಯಾಗುವುದೆಂದು ವಾದಿಸಲಾಗಿದೆ. ಇಂತಹ ತತ್ತ್ವಜ್ಞಾನದಿಂದ ಆತ್ಯಂತಿಕದುಃಖನಾಶವೂ ತನ್ಮೂಲಕ ನಿಃಶ್ರೇಯಸ(ಮೋಕ್ಷ)ಸಿದ್ಧಿಯೂ ಸಂಭವಿಸುವುದೆಂಬುದು ನ್ಯಾಯದರ್ಶನದ ಪರಮಾರ್ಥ.

ವೈಶೇಷಿಕದರ್ಶನದಂತೆ ವಿಭಜನೆಯ ವಿಧಾನದಿಂದ ಪ್ರಪಂಚವನ್ನು ಅರಿಯುವ ಪ್ರಯತ್ನ ಈ ದರ್ಶನದಲ್ಲಿ ಗೌಣವಾಗಿ ಆತ್ಮಾನಾತ್ಮವಿವೇಕವೇ ಪ್ರಾಧಾನ್ಯ ಪಡೆದುದರಿಂದ ನ್ಯಾಯದರ್ಶನಕ್ಕೆ 'ಆತ್ಮವಿದ್ಯಾ', 'ಆನ್ವೀಕ್ಷಿಕೀ' ಎಂದೂ ನಾಮಾಂತರಗಳಿವೆ.

## ನ್ಯಾಯ-ವೈಶೇಷಿಕದರ್ಶನಗಳಲ್ಲಿ ಮತಭೇದಗಳು

ನ್ಯಾಯದರ್ಶನ

1. ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ ಎಂದು ಪ್ರಮಾಣಗಳು ನಾಲ್ಕು.
2. ವಿಶೇಷ ಎಂಬ ಪದಾರ್ಥಕ್ಕೆ ಪ್ರತ್ಯೇಕಸ್ಥಾನವಿಲ್ಲ.
3. ಪ್ರಮಾಣಕ್ಕೆ ಪ್ರಾಧಾನ್ಯ.
4. ಪದಾರ್ಥಗಳು ಒಟ್ಟಿನಲ್ಲಿ ಹದಿನಾರು.
5. ಸಮವಾಯ ಎಂಬ ಪದಾರ್ಥ ಪ್ರತ್ಯಕ್ಷ.
6. ದ್ವಿತ್ವಾದಿಸಂಖ್ಯೆಗಳು ಅಪೇಕ್ಷಾಬುದ್ಧಿಜ್ಞಾಪ್ಯ.

7. ವಿಭಾಗಜವಿಭಾಗದ ನಿರಾಕರಣೆ.
8. ಪಿಠರಪಾಕವಾದದ ಪ್ರತಿಪಾದನೆ.
9. ಆತ್ಮವು ಮಾನಸಪ್ರತ್ಯಕ್ಷವಿಷಯ.
10. ಜ್ಞೇಯವಿಷಯ ಜ್ಞಾನಸಂಬಂಧಿತತ್ತ್ವ.

ವೈಶೇಷಿಕದರ್ಶನ

1. ಪ್ರತ್ಯಕ್ಷ ಮತ್ತು ಅನುಮಾನ ಎಂದು ಎರಡೇ ಪ್ರಮಾಣಗಳು.
2. ವಿಶೇಷ ಎಂಬ ಪದಾರ್ಥಕ್ಕೆ ಪ್ರಾಧಾನ್ಯ.
3. ಪ್ರಮೇಯಕ್ಕೆ ಪ್ರಾಧಾನ್ಯ.
4. ಪದಾರ್ಥಗಳು ಒಟ್ಟಿನಲ್ಲಿ ಏಳು.
5. ಸಮವಾಯವು ಅತೀಂದ್ರಿಯ ಮತ್ತು ಅನುಮೇಯ.
6. ದ್ವಿತ್ವಾದಿ ಸಂಖ್ಯೆಗಳು ಅಪೇಕ್ಷಾಬುದ್ಧಿಜನ್ಯ.
7. ವಿಭಾಗಜ ವಿಭಾಗದ ಅಂಗೀಕಾರ.
8. ಪೀಲುಪಾಕವಾದದ ಪ್ರತಿಪಾದನೆ.
9. ಆತ್ಮವು ಅಪ್ರತ್ಯಕ್ಷ ಮತ್ತು ಅನುಮಾನಗಮ್ಯ.
10. ಜ್ಞೇಯವಿಷಯ ವಸ್ತುಸಂಬಂಧಿತತ್ತ್ವ.

ನ್ಯಾಯ ಮತ್ತು ವೈಶೇಷಿಕದರ್ಶನಗಳ ಸಮನ್ವಯ

ಇವೆರಡು ದರ್ಶನಗಳಲ್ಲಿ ಇಷ್ಟೊಂದು ವೈಷಮ್ಯಗಳಿದ್ದರೂ ಜ್ಞಾನತತ್ತ್ವ ಮತ್ತು ವಸ್ತುತತ್ತ್ವಗಳು ಪರಸ್ಪರ ಪೂರಕಗಳು ಮತ್ತು ಒಂದರ ಅಭಾವದಲ್ಲಿ ಇನ್ನೊಂದರ ಅಸ್ತಿತ್ವ ಅಪೂರ್ಣವಾಗುತ್ತದೆ ಎಂಬ ಅಂಶವನ್ನು ಮನಗಂಡು ಇವೆರಡೂ ದರ್ಶನಗಳನ್ನು ಸಮನ್ವಯಗೊಳಿಸುವ ಪ್ರಯತ್ನದ ಫಲವೇ ತಾರ್ಕಿಕದರ್ಶನ.

ಎಲ್ಲ ದರ್ಶನಗಳ, ವಿಶೇಷವಾಗಿ ಆಸ್ತಿಕದರ್ಶನಗಳ ಮೂಲಭೂತಸಿದ್ಧಾಂತಗಳನ್ನು ಗಮನಿಸಿದಾಗ ಈ ದರ್ಶನಗಳು ದೃಶ್ಯಪ್ರಪಂಚದ ವಿಭಾಗ-ವಿಶ್ಲೇಷಣೆಗಳನ್ನು ನಿರೂಪಿಸಿ ಆತ್ಯಂತಿಕಸತ್ಯ ಯಾವುದೆಂಬುದನ್ನು ತಮ್ಮ ತಮ್ಮ ಪರಿಮಿತಿಯೊಳಗೆ ಕಂಡುಕೊಂಡಿವೆಯೆಂಬುದು ತಿಳಿಯುತ್ತದೆ. ಭೌತಿಕಪ್ರಪಂಚದ ಅರಿವು ಮಾತ್ರ ಇವುಗಳ ಧ್ಯೇಯವಲ್ಲ. ಜ್ಞಾನೇಂದ್ರಿಯ-ಗಳಿಂದ ಗ್ರಾಹ್ಯವಾದ ಭೌತಿಕಪ್ರಪಂಚದ ಅರಿವಿನ ಮೂಲಕ ಜ್ಞಾನೇಂದ್ರಿಯಗಳನ್ನು ಮೀರಿದ ಆಧ್ಯಾತ್ಮಿಕಸತ್ಯದ ಅರಿವಿನತ್ತ ಅವು ಉನ್ಮುಖವಾಗುವುದರಿಂದ ಯಾವುದೇ ದರ್ಶನವನ್ನು ಪೂರ್ಣವಾಗಿ ಆಧುನಿಕ ಪರಿಭಾಷೆಯ 'ಶುದ್ಧವಿಜ್ಞಾನ' ಎನ್ನುವಂತಿಲ್ಲ. ಭಾರತದಲ್ಲಿ ತತ್ತ್ವಜ್ಞಾನಕ್ಕೆ ಸಹಕಾರಿಯಾಗುವುದರಲ್ಲಿಯೇ ಲೌಕಿಕವಿಜ್ಞಾನ ತನ್ನ ಸಾರ್ಥಕತೆಯನ್ನು ಪಡೆದುಕೊಂಡಿತು.

ಹಾಗಿರಬೇಕಾದುದು ಅಪೇಕ್ಷಿತ ಕೂಡ. ಆದರೆ ತತ್ತ್ವಪ್ರತಿಷ್ಠಾಪನೆಯ ಧ್ಯೇಯಸಾಧನೆಯಲ್ಲಿ ವಿಜ್ಞಾನ ಅನೇಕ ಕಡೆಗಳಲ್ಲಿ ಕಲ್ಪನಾಮಾತ್ರನಿಷ್ಠವಾಗಿ ತನ್ನ ಪ್ರಾಯೋಗಿಕಶುದ್ಧತೆಯನ್ನು

ಕಳೆದುಕೊಂಡ ಸ್ಥಿತಿ ಒದಗಿರುವಂತೆ ತೋರುತ್ತದೆ. ವಿಶೇಷವಾಗಿ ತಾರ್ಕಿಕದರ್ಶನದಲ್ಲಿ ಎಲ್ಲ ವೈಜ್ಞಾನಿಕವಿಭಜನೆಗಳನ್ನೂ ಒಂದು ತತ್ತ್ವಶಾಸ್ತ್ರೀಯ ಅಥವಾ ಧಾರ್ಮಿಕ ಅಂಶದಲ್ಲಿಯೇ ಪರ್ಯವಸಾನಗೊಳಿಸುವ ಪ್ರವೃತ್ತಿಯಿದೆ. ಪ್ರಾಯಶಃ ತಮ್ಮ ಶಾಸ್ತ್ರೀಯಗ್ರಂಥಕ್ಕೆ ಒಂದು ಅನುಸ್ಯೂತತೆಯನ್ನು ಸಂಪಾದಿಸುವುದಕ್ಕಾಗಿ ವಿಜ್ಞಾನವನ್ನು ಬಗ್ಗಿಸುವ ಈ ಪ್ರವೃತ್ತಿಯಿಂದ ಒಂದೆಡೆ ಶಾಸ್ತ್ರಗ್ರಂಥವೇ ಸಮರ್ಥನೆಯ ಅಭಾವದಿಂದ ಊನವಾಗಿ ತನ್ನ ಶಾಸ್ತ್ರಶುದ್ಧತೆಯನ್ನು ಕೆಲಮಟ್ಟಿಗೆ ಕಳೆದುಕೊಂಡರೆ ಇನ್ನೊಂದೆಡೆ 'ಶುದ್ಧವಿಜ್ಞಾನ' ಒಂದು ಸ್ವತಂತ್ರಶಾಖೆಯಾಗಿ ವಿಕಸಿತವಾಗುವ ಸಾಧ್ಯತೆಯನ್ನು ಈ ದೇಶ ಕಳೆದುಕೊಂಡಿತು ಎಂದು ಕೆಲವರು ವಾದಿಸುತ್ತಾರೆ.

ಆದರೆ ಭೌತಿಕಪ್ರಪಂಚವನ್ನು ಕುರಿತ ತರ್ಕಶಾಸ್ತ್ರದಲ್ಲಿಯ ಕೆಲವು ವಿವರಣೆಗಳು (ಉದಾಹರಣೆಗೆ: 'ಜಲೀಯಶರೀರ ವರುಣಲೋಕದಲ್ಲಿದೆ' ಎಂಬುದು) ಇಂದಿನ ನಮಗೆ ಕೇವಲ ಪುರಾಣಕಲ್ಪನೆಯಾಗಿ ಕಾಣಲು ಮುಖ್ಯ ಕಾರಣವೆಂದರೆ ಅಂದಿನ ದಾರ್ಶನಿಕರು ಯಾವುದನ್ನು ಕಾಣಲು ಶಕ್ತರಾಗಿದ್ದರೋ ಅದನ್ನು ಕಾಣಲು ನಾವು ಅಶಕ್ತರಾಗಿರುವುದು ಎಂದೇಕೆ ನಾವು ಯೋಚಿಸಬಾರದು? ಯೋಗಸಾಧನೆಯ ಮೂಲಕ ದಾರ್ಶನಿಕರು ಪಡೆದಿರಬಹುದಾದ ಇಂದ್ರಿಯಗಳ ಪಟುತ್ವ ಮತ್ತು ಮನಶ್ಶಕ್ತಿಗಳನ್ನು ಹಾಗೂ ಆ ಮೂಲಕ ತೆರೆದುಕೊಳ್ಳುವ ವಿಶ್ವರಹಸ್ಯದ ಸಾಧ್ಯತೆಗಳನ್ನು ಬಾಹ್ಯ ಉಪಕರಣಗಳ ಮೂಲಕ ವಿಶ್ವವನ್ನು ಕಾಣಲು ಹೊರಟ ನಾವು ಕಳೆದುಕೊಂಡಿರಲು ಸಾಧ್ಯ.

## ತರ್ಕಸಂಗ್ರಹ

ತಾರ್ಕಿಕದರ್ಶನದ ಮೂಲವನ್ನು ಉಪಲಬ್ಧ ಪ್ರಮಾಣಗಳ ರೀತ್ಯಾ ಕ್ರಿ. ಶ. ಸುಮಾರು 10ನೆಯ ಶತಮಾನದಲ್ಲಿ ರಚಿತವಾದ ಶಿವಾದಿತ್ಯಮಿಶ್ರನ 'ಸಪ್ತಪದಾರ್ಥೀ' ಎಂಬ ಗ್ರಂಥದಲ್ಲಿ ಗುರುತಿಸಬಹುದು. ಆದರೆ ಈ ದರ್ಶನದ ಸಮಗ್ರವೂ ಪ್ರೌಢವೂ ಆದ ಪ್ರಪ್ರಥಮ ವಿವೇಚನೆ ಕಂಡು ಬರುವುದು 17ನೆಯ ಶತಮಾನದ ಪೂರ್ವಾರ್ಧದಲ್ಲಿದ್ದ ವಿಶ್ವನಾಥ ಪಂಚಾನನನ 'ನ್ಯಾಯಸಿದ್ಧಾಂತಮುಕ್ತಾವಲಿ'ಯಲ್ಲಿ. ಪ್ರಚಲಿತದಲ್ಲಿದ್ದ ತಾರ್ಕಿಕಗ್ರಂಥಗಳ ಅತಿಯಾದ ಪ್ರೌಢತೆ ಮತ್ತು ಕ್ಲಿಷ್ಟತೆಗಳನ್ನು ಗಮನಿಸಿದ ಅನ್ನಂಭಟ್ಟರು ತಾರ್ಕಿಕದರ್ಶನದಲ್ಲಿ ಪ್ರವೇಶವನ್ನು ಬಯಸುವ ಜಿಜ್ಞಾಸುಗಳಿಗೆ ಪ್ರವೇಶಯೋಗ್ಯತೆಯನ್ನು ಸಂಪಾದಿಸಿಕೊಡಲು ನ್ಯಾಯ ಮತ್ತು ವೈಶೇಷಿಕ ದರ್ಶನಗಳ ಮೂಲತತ್ತ್ವಗಳನ್ನು ಒಳಗೊಂಡ 'ತರ್ಕಸಂಗ್ರಹ' ಎಂಬ ಗ್ರಂಥವನ್ನು ಸರಳಶೈಲಿ ಹಾಗೂ ನಿರ್ದುಷ್ಟಕ್ರಮದಲ್ಲಿ ರಚಿಸಿದರು. ಇವೆರಡು ದರ್ಶನಗಳಲ್ಲಿಯ ವಿವಾದಗ್ರಸ್ತ ವಿಷಯಗಳನ್ನು ಹೊರತುಪಡಿಸಿ, ಪ್ರಚಲಿತದಲ್ಲಿದ್ದ ವಿಷಯನಿರೂಪಣೆಯ ಕ್ಲಿಷ್ಟಶೈಲಿಯನ್ನು ತ್ಯಜಿಸಿ, ಶಾಸ್ತ್ರಗ್ರಂಥವೊಂದಕ್ಕೆ ಇರಬೇಕಾದ ಖಚಿತತೆ ಮತ್ತು ಸಂಕ್ಷಿಪ್ತತೆಗಳನ್ನು ಅಳವಡಿಸಿ ಸರ್ವಜನಾದರಣೀಯವಾದ ಗ್ರಂಥವೊಂದನ್ನು ರಚಿಸಿದ ಶ್ರೇಯಸ್ಸು ತರ್ಕಸಂಗ್ರಹಕಾರರಿಗೆ ಸಲ್ಲುತ್ತದೆ.

ಹೀಗಿದ್ದರೂ ಕೆಲವಿಷಯಗಳ ಸರಳನಿರೂಪಣೆಯೇ ಅಸಾಧ್ಯವಾದುದರಿಂದ ವಿವರಣಾತ್ಮಕ ವ್ಯಾಖ್ಯಾನದ ಆವಶ್ಯಕತೆ 'ದೀಪಿಕಾ' ಎಂಬ ವ್ಯಾಖ್ಯಾನಕ್ಕೆ ಪ್ರಚೋದನೆಯನ್ನು ನೀಡಿತು.

### ಅನ್ನಂಭಟ್ಟರ ದೇಶ-ಕಾಲ

ದೀಪಿಕೆಯ ಸಮಾಪ್ತಿವಾಕ್ಯದಲ್ಲಿ ಅನ್ನಂಭಟ್ಟರನ್ನು ಕುರಿತು ಈ ವಿವರವಿದೆ: ಅದ್ವೈತ ವಿದ್ಯಾಚಾರ್ಯನೆಂದು ಬಿರುದಾಂಕಿತನಾದ 'ತಿರುಮಲ' ಅನ್ನಂಭಟ್ಟರ ತಂದೆ. ತಿರುಮಲರು ಋಗ್ವೇದಿಸ್ಮಾರ್ತಬ್ರಾಹ್ಮಣರಾಗಿದ್ದು ವೇದಾಂತವಿದ್ವಾಂಸರಾಗಿದ್ದರು. ಇತರ ಆಧಾರಗಳಿಂದ ಅನ್ನಂಭಟ್ಟರು ಆಂಧ್ರದೇಶೀಯರಾಗಿದ್ದು ಕಾಶಿಯಲ್ಲಿ ವ್ಯಾಸಂಗ ಮಾಡಿದ್ದರೆಂದು (काशीगमनमात्रेण नान्नंभट्टायते द्विज:) ತಿಳಿದುಬರುತ್ತದೆ. ಬಳಿಕ ಆಂಧ್ರದಲ್ಲಿಯೇ ನ್ಯಾಯಶಾಸ್ತ್ರದ ಅಧ್ಯಯನಕ್ಕಾಗಿ ಪಾಠಶಾಲೆಯೊಂದನ್ನು ಸ್ಥಾಪಿಸಿ ಅದರಲ್ಲಿ ತಾವೂ ಅಧ್ಯಾಪಕರಾಗಿ ಬೋಧನೆ ಮಾಡಿದರು.

ತರ್ಕಸಂಗ್ರಹದ ಹಸ್ತಪ್ರತಿಯೊಂದು ಕ್ರಿ. ಶ. 1724ರಲ್ಲಿ ಲಿಖಿತವಾದುದರಿಂದ ಅನ್ನಂಭಟ್ಟರು ಅದಕ್ಕಿಂತ ಪೂರ್ವಕಾಲೀನ. 16ನೆಯ ಶತಮಾನದಲ್ಲಿ ರಚಿತವಾದ 'ದೀಧಿತಿ'ಯೆಂಬ ಗ್ರಂಥದ ಉಲ್ಲೇಖವು ದೀಪಿಕೆಯಲ್ಲಿ ಇರುವುದರಿಂದ ಅವರು ಅದಕ್ಕಿಂತ ಉತ್ತರಕಾಲೀನ. ಈ ಪ್ರಮಾಣಗಳ ಆಧಾರದಿಂದ ಅನ್ನಂಭಟ್ಟರು ಕ್ರಿ. ಶ. 1625ರಿಂದ ಕ್ರಿ. ಶ. 1700ರ ಅವಧಿಯಲ್ಲಿ ಜೀವಿಸಿರಬಹುದು. ಆದರೂ ಅವರ ಕಾಲದ ವಿಷಯದಲ್ಲಿ ಭಿನ್ನಾಭಿಪ್ರಾಯವಿದೆ.

ತರ್ಕಸಂಗ್ರಹ ಮತ್ತು ದೀಪಿಕೆಯಲ್ಲದೆ ಮಿತಾಕ್ಷರಾ, ತತ್ತ್ವಬೋಧಿನೀಟೀಕಾ, ನ್ಯಾಯಪರಿಶಿಷ್ಟಪ್ರಕಾಶ, ಸುಬೋಧಿನೀಸುಧಾಸಾರ ಮತ್ತು ಪ್ರದೀಪವ್ಯಾಖ್ಯಾನವಾದ ಉದ್ಯೋತನ ಎಂಬವು ಅನ್ನಂಭಟ್ಟರಿಂದ ರಚಿತವಾದ ಪ್ರಧಾನಗ್ರಂಥಗಳು. ಆದರೆ ಅತ್ಯಧಿಕ ಜನಪ್ರಿಯತೆಯನ್ನು ಪಡೆದ ಕೃತಿ ತರ್ಕಸಂಗ್ರಹ. ನ್ಯಾಯ-ವೈಶೇಷಿಕದರ್ಶನಗಳ ತತ್ತ್ವಗಳನ್ನು ಸಮನ್ವಯಿಸುವಾಗ ಯಾವುದೇ ಪಕ್ಷದತ್ತವೂ ಅಕಾರಣ ಒಲವು ತೋರದೆ ನಿಷ್ಪಕ್ಷಪಾತವಾಗಿ ಮತಭೇದಗಳನ್ನು ಚರ್ಚಿಸಿ ಸರಳವಾಗಿ ಸಂಗ್ರಹಿಸಿದ್ದರಿಂದ ಈ ಗ್ರಂಥ 60ಕ್ಕೂ ಅಧಿಕ ವ್ಯಾಖ್ಯಾನಗಳನ್ನು ಹೊಂದಿರುವುದು ಅದರ ಶ್ರೇಷ್ಠತೆಯ ದ್ಯೋತಕವಾಗಿದೆ.

श्रीमदन्नंभट्टविरचित:

# तर्कसङ्ग्रह:

1. निधाय हृदि विश्वेशं विधाय गुरुवन्दनम्।
   बालानां सुखबोधाय क्रियते तर्कसङ्ग्रह:।।

2. द्रव्यगुणकर्मसामान्यविशेषसमवायाभावा: सप्त पदार्था:।

3. तत्र द्रव्याणि पृथिव्यप्तेजोवाय्वाकाशकालदिगात्ममनांसि नवैव।

4. रूपरसगन्धस्पर्शसङ्ख्यापरिमाणपृथक्त्वसंयोगविभागपरत्वापरत्व-गुरुत्वद्रवत्वस्नेहशब्दबुद्धिसुखदु:खेच्छाद्वेषप्रयत्नधर्माधर्मसंस्काराश्चतु-र्विंशतिर्गुणा:।

5. उत्क्षेपणापक्षेपणाकुञ्चनप्रसारणगमनानि पञ्च कर्माणि।

6. परमपरं चेति द्विविधं सामान्यम्।

7. नित्यद्रव्यवृत्तयो विशेषास्त्वनन्ता एव।

8. समवायस्त्वेक एव।

9. अभावश्चतुर्विध: प्रागभाव: प्रध्वंसाभावोऽत्यन्ताभावोऽन्योन्याभावश्चेति।

10. तत्र गन्धवती पृथिवी। सा द्विविधा नित्याऽनित्या च। नित्या परमाणुरूपा। अनित्या कार्यरूपा। पुनस्त्रिविधा शरीरेन्द्रियविषयभेदात्। शरीर-मस्मदादीनाम्। इन्द्रियं गन्धग्राहकं घ्राणं नासाग्रवर्ति। विषयो मृत्पाषाणादि:।

11. शीतस्पर्शवत्य आपः। ता द्विविधा नित्या अनित्याश्च। नित्याः परमाणुरूपाः। अनित्याः कार्यरूपाः। पुनस्त्रिविधाः शरीरेन्द्रियविषय-भेदात्। शरीरं वरुणलोके। इन्द्रियं रसग्राहकं रसनं जिह्वाग्रवर्ति। विषयः सरित्समुद्रादिः।

12. उष्णस्पर्शवत्तेजः। तद्द्विविधं नित्यमनित्यं च। नित्यं परमाणुरूपम्। अनित्यं कार्यरूपम्। पुनस्त्रिविधं शरीरेन्द्रियविषयभेदात्। शरीर-मादित्यलोके। इन्द्रियं रूपग्राहकं चक्षुः कृष्णताराग्रवर्ति। विषयश्चतु-र्विधः। भौमदिव्यौदर्याकरजभेदात्। भौमं वह्न्यादिकम्। अबिन्धनं दिव्यं विद्युदादि। भुक्तस्य परिणामहेतुरौदर्यम्। आकरजं सुवर्णादि।

13. रूपरहितः स्पर्शवान्वायुः। स द्विविधो नित्योऽनित्यश्च। नित्यः परमाणुरूपः। अनित्यः कार्यरूपः। पुनस्त्रिविधः शरीरेन्द्रियविषयभेदात्। शरीरं वायुलोके। इन्द्रियं स्पर्शग्राहकं त्वक् सर्वशरीरवर्ति। विषयो वृक्षादिकम्पनहेतुः। शरीरान्तःसञ्चारी वायुः प्राणः। स चैकोऽप्युपा-धिभेदात्प्राणापानादिसंज्ञां लभते।

14. शब्दगुणकमाकाशम्। तच्चैकं विभु नित्यं च। अतीतादिव्यवहारहेतुः कालः। स चैको विभुर्नित्यश्च। प्राच्यादिव्यवहारहेतुर्दिक्। सा चैका विभ्वी नित्या च।

15. ज्ञानाधिकरणमात्मा। स द्विविधः परमात्मा जीवात्मा चेति। तत्रेश्वरः सर्वज्ञः परमात्मैक एव। जीवात्मा प्रतिशरीरं भिन्नो विभुर्नित्यश्च।

16. सुखाद्युपलब्धिसाधनमिन्द्रियं मनः। तच्च प्रत्यात्मनियतत्वादनन्तं परमाणुरूपं नित्यं च।

17. चक्षुर्मात्रग्राह्यो गुणो रूपम्। तच्च शुक्लनीलपीतरक्तहरितकपिश-चित्रभेदात्सप्तविधम्। पृथिवीजलतेजोवृत्ति। तत्र पृथिव्यां सप्तविधम्। अभास्वरशुक्लं जले। भास्वरशुक्लं तेजसि।

18. रसनग्राह्यो गुणो रसः। स च मधुराम्ललवणकटुकषायतिक्तभेदात् षड्विधः। पृथिवीजलवृत्तिः। पृथिव्यां षड्विधः। जले मधुर एव।

19. घ्राणग्राह्यो गुणो गन्धः। स द्विविधः सुरभिरसुरभिश्च। पृथिवीमात्रवृत्तिः।

20. त्वगिन्द्रियमात्रग्राह्यो गुणः स्पर्शः। स च त्रिविधः शीतोष्णानुष्णा-शीतभेदात्। पृथिव्यप्तेजोवायुवृत्तिः। तत्र शीतो जले। उष्णस्तेजसि। अनुष्णाशीतः पृथिवीवाय्वोः।

21. रूपादिचतुष्टयं पृथिव्यां पाकजमनित्यं च। अन्यत्रापाकजं नित्यमनित्यं च। नित्यगतं नित्यम्। अनित्यगतमनित्यम्।

22. एकत्वादिव्यवहारहेतुः सङ्ख्या। नवद्रव्यवृत्तिः। एकत्वादिपरार्धपर्यन्ता। एकत्वं नित्यमनित्यं च। नित्यगतं नित्यम्। अनित्यगतमनित्यम्। द्वित्वादिकं तु सर्वत्रानित्यमेव।

23. मानव्यवहारकारणं परिमाणम्। नवद्रव्यवृत्ति। तच्चतुर्विधम्, अणु महद् दीर्घं ह्रस्वं चेति। पृथग्व्यवहारकारणं पृथक्त्वम्। सर्वद्रव्यवृत्ति।

24. संयुक्तव्यवहारहेतुः संयोगः। सर्वद्रव्यवृत्तिः। संयोगनाशको गुणो विभागः। सर्वद्रव्यवृत्तिः।

25. परापरव्यवहारासाधारणकारणे परत्वापरत्वे। पृथिव्यादिचतुष्टय-मनोवृत्तिनी। ते द्विविधे दिक्कृते कालकृते च। दूरस्थे दिक्कृतं

परत्वम्। समीपस्थे दिक्कृतमपरत्वम्। ज्येष्ठे कालकृतं परत्वम्। कनिष्ठे कालकृतमपरत्वम्।

26. आद्यपतनासमवायिकारणं गुरुत्वम्। पृथिवीजलवृत्ति। आद्यस्यन्द-नासमवायिकारणं द्रवत्वम्। पृथिवीजलतेजोवृत्ति। तद्द्विविधं सांसिद्धिकं नैमित्तिकं च। सांसिद्धिकं जले। नैमित्तिकं पृथिवीतेजसोः। पृथिव्यां घृतादावग्निसंयोगजन्यं द्रवत्वम्। तेजसि सुवर्णादौ।

27. चूर्णादिपिण्डीभावहेतुर्गुणः स्नेहः। जलमात्रवृत्तिः।

28. श्रोत्रग्राह्यो गुणः शब्दः। आकाशमात्रवृत्तिः। स द्विविधः ध्वन्यात्मको वर्णात्मकश्चेति। ध्वन्यात्मको भेर्यादौ। वर्णात्मकः संस्कृतभाषादिरूपः।

29. सर्वव्यवहारहेतुर्ज्ञानं बुद्धिः। सा द्विविधा स्मृतिरनुभवश्च। संस्कारमात्र-जन्यं ज्ञानं स्मृतिः। तद्भिन्नं ज्ञानमनुभवः। स द्विविधः यथार्थोऽयथार्थश्च। तद्वति तत्प्रकारकोऽनुभवो यथार्थः। यथा रजत इदं रजतमिति ज्ञानम्। स एव प्रमेत्युच्यते। तदभाववति तत्प्रकारकोऽनुभवोऽयथार्थः। यथा शुक्ताविदं रजतमिति ज्ञानम्।

यथार्थानुभवश्चतुर्विधः प्रत्यक्षानुमित्युपमितिशाब्दभेदात्। तत्करणमपि चतुर्विधं प्रत्यक्षानुमानोपमानशाब्दभेदात्।

30. असाधारणं कारणं करणम्। कार्यनियतपूर्ववृत्ति कारणम्। कार्यं प्रागभावप्रतियोगि।

कारणं त्रिविधं समवाय्यसमवायिनिमित्तभेदात्। यत्समवेतं कार्यमुत्पद्यते तत्समवायिकारणम्। यथा तन्तवः पटस्य, पटश्च स्वगतरूपादेः। कार्येण कारणेन वा सहैकस्मिन्नर्थे समवेतत्वे सति यत्कारणं

तदसमवायिकारणम्। यथा तन्तुसंयोगः पटस्य, तन्तुरूपं पटरूपस्य। तदुभयभिन्नं कारणं निमित्तकारणम्। यथा तुरीवेमादिकं पटस्य। तदेतत्त्रिविधकारणमध्ये यदसाधारणं कारणं तदेव करणम्।

31. तत्र प्रत्यक्षज्ञानकरणं प्रत्यक्षम्। इन्द्रियार्थसंनिकर्षजन्यं ज्ञानं प्रत्यक्षम् । तद्द्विविधं निर्विकल्पकं सविकल्पकं चेति। तत्र निष्प्रकारकं ज्ञानं निर्विकल्पकम्। यथेदं किञ्चित्। सप्रकारकं ज्ञानं सविकल्पकम्। यथा डित्थोऽयं ब्राह्मणोऽयं श्यामोऽयं पाचकोऽयमिति।

प्रत्यक्षज्ञानहेतुरिन्द्रियार्थसन्निकर्षः षड्विधः—संयोगः, संयुक्तसमवायः, संयुक्तसमवेतसमवायः, समवायः, समवेतसमवायः विशेषणविशेष्यभावश्चेति। चक्षुषा घटप्रत्यक्षजनने संयोगः सन्निकर्षः। घटरूपप्रत्यक्षे संयुक्तसमवायः सन्निकर्षः। चक्षुःसंयुक्ते घटे रूपस्य समवायात्। रूपत्वसामान्यप्रत्यक्षे संयुक्तसमवेतसमवायः सन्निकर्षः। चक्षुःसंयुक्ते घटे रूपं समवेतम्, तत्र रूपत्वस्य समवायात्। श्रोत्रेण शब्दसाक्षात्कारे समवायः सन्निकर्षः। कर्णविवरवर्त्याकाशस्य श्रोत्रत्वात्, शब्दस्याकाशगुणत्वात्, गुणगुणिनोश्च समवायात्। शब्दत्वसाक्षात्कारे समवेतसमवायः सन्निकर्षः। श्रोत्रसमवेते शब्दे शब्दत्वस्य समवायात्। अभावप्रत्यक्षे विशेषणविशेष्यभावः सन्निकर्षः। घटाभाववद्भूतलमित्यत्र चक्षुःसंयुक्ते भूतले घटाभावस्य विशेषणत्वात्। एवं सन्निकर्षषट्कजन्यं ज्ञानं प्रत्यक्षम्। तत्करणमिन्द्रियम्। तस्मादिन्द्रियं प्रत्यक्षप्रमाणमिति सिद्धम्।

32. अनुमितिकरणमनुमानम्। परामर्शजन्यं ज्ञानमनुमितिः। व्याप्तिविशिष्टपक्षधर्मताज्ञानं परामर्शः। यथा वह्निव्याप्यधूमवानयं पर्वत इति ज्ञानं

परामर्शः। तज्जन्यं पर्वतो वह्निमान् इति ज्ञानमनुमितिः। यत्र धूमस्तत्राग्नि-रिति साहचर्यनियमो व्याप्तिः। व्याप्यस्य पर्वतादिवृत्तित्वं पक्षधर्मता। अनुमानं द्विविधं स्वार्थं परार्थं च। तत्र स्वार्थं स्वानुमितिहेतुः। तथाहि-स्वयमेव भूयोदर्शनेन यत्र धूमस्तत्राग्निरिति महानसादौ व्याप्तिं गृहीत्वा पर्वतसमीपं गतस्तद्गते चाग्नौ सन्दिहानः पर्वते धूमं पश्यन् व्याप्तिं स्मरति यत्र धूमस्तत्राग्निरिति। तदनन्तरं वह्निव्याप्यधूमवानयं पर्वत इति ज्ञानमुत्पद्यते। अयमेव लिङ्गपरामर्श इत्युच्यते। तस्मात्पर्वतो वह्निमानिति ज्ञानमनुमितिरुत्पद्यते। तदेतत् स्वार्थानुमानम्।

33. यत्तु स्वयं धूमादग्निमनुमाय परप्रतिपत्त्यर्थं पञ्चावयववाक्यं प्रयुङ्क्ते तत्परार्थानुमानम्। यथा पर्वतो वह्निमान्। धूमवत्त्वात्। यो यो धूमवान् स स वह्निमान् यथा महानसः। तथा चायम्। तस्मात्तथेति। अनेन प्रतिपादिताल्लिङ्गात्परोऽप्यग्निं प्रतिपद्यते। प्रतिज्ञाहेतूदाहरणोपनय-निगमनानि पञ्चावयवाः। पर्वतो वह्निमानिति प्रतिज्ञा। धूमवत्त्वादिति हेतुः। यो यो धूमवान्स स वह्निमान् यथा महानस इत्युदाहरणम्। तथा चायमित्युपनयः। तस्मात्तथेति निगमनम्।

34. स्वार्थानुमितिपरार्थानुमित्योर्लिङ्गपरामर्श एव करणम्। तस्माल्लि-ङ्गपरामर्शोऽनुमानम्।

लिङ्गं त्रिविधम् अन्वयव्यतिरेकि केवलान्वयि केवलव्यतिरेकि चेति। अन्वयेन व्यतिरेकेण च व्याप्तिमदन्वयव्यतिरेकि। यथा वह्नौ साध्ये धूमवत्त्वम्। यत्र धूमस्तत्राग्निर्यथा महानस इत्यन्वयव्याप्तिः। यत्र वह्निर्नास्ति तत्र धूमोऽपि नास्ति यथा महाह्रद इति व्यतिरेकव्याप्तिः। अन्वयमात्रव्याप्तिकं केवलान्वयि। यथा घटोऽभिधेयः प्रमेयत्वात्

पटवत्। अत्र प्रमेयत्वाभिधेयत्वयोर्व्यतिरेकव्याप्तिर्नास्ति सर्वस्यापि प्रमेयत्वाभिधेयत्वाच्च। व्यतिरेकमात्रव्याप्तिकं केवलव्यतिरेकि। यथा पृथिवीतरेभ्यो भिद्यते, गन्धवत्त्वात्। यदितरेभ्यो न भिद्यते न तद्गन्धवत्। यथा जलम्। न चेयं तथा। तस्मान्न तथेति। अत्र यद् गन्धवत् तदितर-भिन्नमित्यन्वयदृष्टान्तो नास्ति पृथिवीमात्रस्य पक्षत्वात्।

35. सन्दिग्धसाध्यवान् पक्षः। यथा धूमवत्त्वे हेतौ पर्वतः। निश्चितसाध्यवान् सपक्षः। यथा तत्रैव महानसः। निश्चितसाध्याभाववान्विपक्षः यथा तत्रैव महाह्रदः।

36. सव्यभिचारविरुद्धसत्प्रतिपक्षासिद्धबाधिताः पञ्च हेत्वाभासाः।

37. सव्यभिचारोऽनैकान्तिकः। स त्रिविधः साधारणासाधारणानुप-संहारिभेदात्। तत्र साध्याभाववद्वृत्तिः साधारणोऽनैकान्तिकः। यथा पर्वतो वह्निमान्, प्रमेयत्वादिति। प्रमेयत्वस्य वह्न्यभाववति ह्रदे विद्यमानत्वात्। सर्वसपक्षविपक्षव्यावृत्तः पक्षमात्रवृत्तिः असाधारणः। यथा शब्दो नित्यः, शब्दत्वादिति। शब्दत्वं सर्वेभ्यो नित्येभ्योऽनित्येभ्यश्च व्यावृत्तं शब्दमात्रवृत्ति। अन्वयव्यतिरेकदृष्टान्तरहितोऽनुपसंहारी। यथा सर्वमनित्यं प्रमेयत्वादिति। अत्र सर्वस्यापि पक्षत्वाद्दृष्टान्तो नास्ति।

38. साध्याभावव्याप्तो हेतुर्विरुद्धः। यथा शब्दो नित्यः, कृतकत्वादिति। कृतकत्वं हि नित्यत्वाभावेनानित्यत्वेन व्याप्तम्।

39. यस्य साध्याभावसाधकं हेत्वन्तरं विद्यते स सत्प्रतिपक्षः। यथा शब्दो नित्यः, श्रावणत्वात्, शब्दत्ववत्। शब्दोऽनित्यः, कार्यत्वात्, घटव-दिति।

40. असिद्धस्त्रिविधः आश्रयासिद्धः स्वरूपासिद्धो व्याप्यत्वासिद्धश्चेति। आश्रयासिद्धो यथा गगनारविन्दं सुरभि, अरविन्दत्वात्, सरोजारविन्दवत्। अत्र गगनारविन्दमाश्रयः, स च नास्त्येव। स्वरूपासिद्धो यथा शब्दोऽनित्यश्चाक्षुषत्वात्, रूपवदिति। अत्र चाक्षुषत्वं शब्दे नास्ति, शब्दस्य श्रावणत्वात्।

41. सोपाधिको हेतुर्व्याप्यत्वासिद्धः। साध्यव्यापकत्वे सति साधनाव्यापकत्वमुपाधिः। साध्यसमानाधिकरणात्यन्ताभावाप्रतियोगित्वं साध्यव्यापकत्वम्। साधनवन्निष्ठात्यन्ताभावप्रतियोगित्वं साधनाव्यापकत्वम्। पर्वतो धूमवान् वह्निमत्त्वात् इत्यत्रार्द्रेन्धनसंयोग उपाधिः। तथा हि– यत्र धूमस्तत्रार्द्रेन्धनसंयोग इति साध्यव्यापकता। यत्र वह्निस्तत्रार्द्रेन्धनसंयोगो नास्ति, अयोगोलके आर्द्रेन्धनसंयोगाभावादिति साधनाव्यापकता। एवं साध्यव्यापकत्वे सति साधनाव्यापकत्वादार्द्रेन्धनसंयोग उपाधिः। सोपाधिकत्वाद्वह्निमत्त्वं व्याप्यत्वासिद्धम्।

42. यस्य साध्याभावः प्रमाणान्तरेण निश्चितः स बाधितः। यथा वह्निरनुष्णो, द्रव्यत्वादिति। अत्रानुष्णत्वं साध्यं तदभाव उष्णत्वं स्पार्शनप्रत्यक्षेण गृह्यत इति बाधितत्वम्।

43. उपमितिकरणमुपमानम्। संज्ञासंज्ञिसम्बन्धज्ञानमुपमितिः। तत्करणं सादृश्यज्ञानम्। अतिदेशवाक्यार्थस्मरणमवान्तरव्यापारः। तथा हि– कश्चिद् गवयशब्दार्थमजानन् कुतश्चिदारण्यकपुरुषात् गोसदृशो गवय इति वाक्यं श्रुत्वा वनं गतो गोसदृशं पिण्डं पश्यन् वाक्यार्थं स्मरति। तदनन्तरमसौ गवयपदवाच्य इत्युपमितिरुत्पद्यते।

44. आप्तवाक्यं शब्दः। आप्तस्तु यथार्थवक्ता। वाक्यं पदसमूहः। यथा गामानय इति। शक्तं पदम्। अस्मात्पदादयमर्थो बोद्धव्य इति ईश्वरसङ्केतः शक्तिः।

45. आकाङ्क्षा योग्यता सन्निधिश्च वाक्यार्थज्ञाने हेतुः। पदस्य पदान्तरव्यतिरेकप्रयुक्तान्वयाननुभावकत्वमाकाङ्क्षा। अर्थाबाधो योग्यता। पदानामविलम्बेनोच्चारणं सन्निधिः।

आकाङ्क्षादिरहितं वाक्यमप्रमाणम्। यथा गौरश्वः पुरुषो हस्तीति न प्रमाणमाकाङ्क्षाविरहात्। अग्निना सिञ्चेदिति न प्रमाणं योग्यताविरहात्। प्रहरे प्रहरेऽसहोच्चारितानि गामानय इत्यादिपदानि न प्रमाणं सान्निध्याभावात्। वाक्यं द्विविधं वैदिकं लौकिकं च। वैदिकमीश्वरोक्तत्वात् सर्वमेव प्रमाणम्। लौकिकं त्वाप्तोक्तं प्रमाणम् अन्यदप्रमाणम्। वाक्यार्थज्ञानं शाब्दज्ञानम्। तत्करणं शब्दः।

46. अयथार्थानुभवस्त्रिविधः संशयविपर्ययतर्कभेदात्। एकस्मिन् धर्मिणि विरुद्धनानाधर्मवैशिष्ट्यावगाहिज्ञानं संशयः। यथा स्थाणुर्वा पुरुषो वेति। मिथ्याज्ञानं विपर्ययः। यथा शुक्ताविदं रजतमिति। व्याप्यारोपेण व्यापकारोपस्तर्कः। यथा यदि वह्निर्न स्यात् तर्हि धूमोऽपि न स्यादिति।

47. स्मृतिरपि द्विविधा यथार्था अयथार्था च। प्रमाजन्या यथार्था। अप्रमाजन्या अयथार्था।

48. सर्वेषामनुकूलतया वेदनीयं सुखम्। सर्वेषां प्रतिकूलतया वेदनीयं दुःखम्। इच्छा कामः। क्रोधो द्वेषः। कृतिः प्रयत्नः। विहितकर्मजन्यो धर्मः। निषिद्धकर्मजन्यस्त्वधर्मः।

49. बुद्ध्यादयोऽष्टावात्ममात्रविशेषगुणाः। बुद्धीच्छाप्रयत्ना नित्या अनित्याश्च। नित्या ईश्वरस्य। अनित्या जीवस्य।

50. संस्कारस्त्रिविधः। वेगो भावना स्थितिस्थापकश्चेति। वेगः पृथिव्यादि-चतुष्टयमनोवृत्तिः। अनुभवजन्या स्मृतिहेतुर्भावना। आत्ममात्रवृत्तिः। अन्यथाकृतस्य पुनस्तदवस्थापादकः स्थितिस्थापकः। कटादिपृथिवी-वृत्तिः। इति गुणाः।

51. चलनात्मकं कर्म। ऊर्ध्वदेशसंयोगहेतुरुत्क्षेपणम्। अधोदेशसंयोग-हेतुरपक्षेपणम्। शरीरसन्निकृष्टसंयोगहेतुराकुञ्चनम्। शरीरविप्रकृष्ट-संयोगहेतुः प्रसारणम्। अन्यत्सर्वं गमनम्। पृथिव्यादिचतुष्टयमनो-मात्रवृत्ति।

52. नित्यमेकमनेकानुगतं सामान्यम्। द्रव्यगुणकर्मवृत्ति। तद् द्विविधं परापरभेदात्। परं सत्ता। अपरं द्रव्यत्वादि।

53. नित्यद्रव्यवृत्तयो व्यावर्तका विशेषाः।

54. नित्यसम्बन्धः समवायः। अयुतसिद्धवृत्तिः। ययोर्द्वयोर्मध्ये एकमवि-नश्यदपराश्रितमेवावतिष्ठते तावयुतसिद्धौ। यथा अवयवावयविनौ गुणगुणिनौ क्रियाक्रियावन्तौ जातिव्यक्ती विशेषनित्यद्रव्ये चेति।

55. अनादिः सान्तः प्रागभावः। उत्पत्तेः पूर्वं कार्यस्य। सादिरनन्तः प्रध्वंसः। उत्पत्त्यनन्तरं कार्यस्य। त्रैकालिकसंसर्गावच्छिन्नप्रतियोगिताकोऽ-त्यन्ताभावः। यथा भूतले घटो नास्तीति। तादात्म्यसम्बन्धावच्छिन्न-प्रतियोगिताकोऽन्योन्याभावः। यथा घटः पटो न भवतीति।

सर्वेषां पदार्थानां यथायथमुक्तेष्वन्तर्भावात् सप्तैव पदार्था इति सिद्धम्।

काणादन्यायमतयोर्बालव्युत्पत्तिसिद्धये।
अन्नंभट्टेन विदुषा रचितस्तर्कसङ्ग्रहः।।

**।। इति तर्कसङ्ग्रहः समाप्तः।।**

# ತರ್ಕಸಂಗ್ರಹ

## ಕನ್ನಡ ಅನುವಾದ

1. ವಿಶ್ವದ ಕರ್ತೃವೂ ನಿಯಂತ್ರಕನೂ ಆದ ಶಿವನನ್ನು ಹೃದಯದಲ್ಲಿ ನೆಲೆಗೊಳಿಸಿ, ವಿದ್ಯಾಗುರುವಿಗೆ ವಂದಿಸಿ, ಜಿಜ್ಞಾಸುಗಳಿಗೆ ಅನಾಯಾಸಜ್ಞಾನಕ್ಕಾಗಿ ತರ್ಕಸಂಗ್ರಹವು ರಚಿಸಲ್ಪಡುತ್ತದೆ.

2. ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ ಮತ್ತು ಅಭಾವ ಎಂದು ಏಳು ಪದಾರ್ಥಗಳು.

3. ಪದಾರ್ಥಗಳಲ್ಲಿ ದ್ರವ್ಯಗಳು ಪೃಥಿವೀ, ಅಪ್, ತೇಜಸ್, ವಾಯು, ಆಕಾಶ, ಕಾಲ, ದಿಕ್, ಆತ್ಮಾ ಮತ್ತು ಮನಸ್ ಎಂದು ಒಂಬತ್ತು ಮಾತ್ರ.

4. ರೂಪ, ರಸ, ಗಂಧ, ಸ್ಪರ್ಶ, ಸಂಖ್ಯಾ, ಪರಿಮಾಣ, ಪೃಥಕ್ತ್ವ, ಸಂಯೋಗ, ವಿಭಾಗ, ಪರತ್ವ, ಅಪರತ್ವ, ಗುರುತ್ವ, ದ್ರವತ್ವ, ಸ್ನೇಹ, ಶಬ್ದ, ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ ಮತ್ತು ಸಂಸ್ಕಾರ ಇವು 24 ಗುಣಗಳು.

5. ಉತ್‌ಕ್ಷೇಪಣ, ಅಪಕ್ಷೇಪಣ, ಆಕುಂಚನ, ಪ್ರಸಾರಣ ಮತ್ತು ಗಮನ ಇವು ಐದು ಕರ್ಮಗಳು.

6. ಪರ ಮತ್ತು ಅಪರ ಎಂಬುದಾಗಿ ಸಾಮಾನ್ಯವು ಎರಡು ವಿಧ.

7. ನಿತ್ಯದ್ರವ್ಯಗಳಲ್ಲಿರುವ ವಿಶೇಷಗಳಾದರೋ ಅನಂತಗಳೇ ಆಗಿವೆ.

8. ಸಮವಾಯವು ಒಂದೇ ಆಗಿದೆ.

9. ಅಭಾವವು ನಾಲ್ಕು ವಿಧವಾಗಿದೆ: ಪ್ರಾಗಭಾವ, ಪ್ರಧ್ವಂಸಾಭಾವ, ಅತ್ಯಂತಾಭಾವ ಮತ್ತು ಅನ್ಯೋನ್ಯಾಭಾವ.

10. ದ್ರವ್ಯಗಳಲ್ಲಿ ಗಂಧಯುಕ್ತವಾದುದು ಪೃಥಿವೀ. ಅದು ನಿತ್ಯ ಮತ್ತು ಅನಿತ್ಯ ಎಂದು ಎರಡು ವಿಧ. ನಿತ್ಯವು ಪರಮಾಣುರೂಪಿ ಮತ್ತು ಅನಿತ್ಯವು ಕಾರ್ಯರೂಪಿ. ಶರೀರ, ಇಂದ್ರಿಯ ಮತ್ತು ವಿಷಯಭಿನ್ನತೆಯಿಂದ ಮತ್ತೆ ಮೂರು ವಿಧ. 'ನಮ್ಮ' ಮುಂತಾದವರದು ಶರೀರ. ಮೂಗಿನ ತುದಿಯಲ್ಲಿರುವ ಗಂಧವನ್ನು ಗ್ರಹಿಸುವ ಘ್ರಾಣವು ಇಂದ್ರಿಯ. ಮಣ್ಣು, ಕಲ್ಲು ಮುಂತಾದವು ವಿಷಯ.

11. ಶೀತಸ್ಪರ್ಶಯುಕ್ತವಾದುದು ಜಲ. ಅದು ನಿತ್ಯ ಮತ್ತು ಅನಿತ್ಯ ಎಂದು ಎರಡು ವಿಧ.

ನಿತ್ಯವು ಪರಮಾಣುರೂಪಿ ಮತ್ತು ಅನಿತ್ಯವು ಕಾರ್ಯರೂಪಿ. ಶರೀರ, ಇಂದ್ರಿಯ ಮತ್ತು ವಿಷಯಭಿನ್ನತೆಯಿಂದ ಮತ್ತೆ ಮೂರು ವಿಧ. ಶರೀರವು ವರುಣಲೋಕದಲ್ಲಿದೆ. ನಾಲಿಗೆಯ ತುದಿಯಲ್ಲಿರುವ, ರಸವನ್ನು ಗ್ರಹಿಸುವ ರಸನವು ಇಂದ್ರಿಯ. ನದಿ, ಸಮುದ್ರಾದಿಗಳು ವಿಷಯ.

12. ಉಷ್ಣಸ್ಪರ್ಶಯುಕ್ತವಾದುದು ತೇಜಸ್. ಅದು ನಿತ್ಯ ಮತ್ತು ಅನಿತ್ಯ ಎಂದು ಎರಡು ವಿಧ. ನಿತ್ಯವು ಪರಮಾಣುರೂಪಿ ಮತ್ತು ಅನಿತ್ಯವು ಕಾರ್ಯರೂಪಿ. ಶರೀರ, ಇಂದ್ರಿಯ ಮತ್ತು ವಿಷಯಭಿನ್ನತೆಯಿಂದ ಮತ್ತೆ ಮೂರು ವಿಧ. ಶರೀರವು ಆದಿತ್ಯಲೋಕದಲ್ಲಿದೆ. ಕಣ್ಣಿನ ಪಾಪೆಯ ತುದಿಯಲ್ಲಿರುವ, ರೂಪವನ್ನು ಗ್ರಹಿಸುವ ಚಕ್ಷುವು ಇಂದ್ರಿಯ. ವಿಷಯವು ಭೌಮ, ದಿವ್ಯ, ಔದರ್ಯ ಮತ್ತು ಆಕರಜ ಎಂಬ ಭೇದಗಳಿಂದ ನಾಲ್ಕು ವಿಧ. ಬೆಂಕಿ ಮುಂತಾದವು ಭೌಮ ವಿಷಯ. ಜಲವು ಇಂಧನ- ವಾಗಿರುವ ಮಿಂಚು ಮುಂತಾದವು ದಿವ್ಯ ವಿಷಯ. ಭಕ್ಷಿಸಿದುದರ ಪಚನಕ್ರಿಯೆಗೆ ಕಾರಣವಾದುದು ಔದರ್ಯ. ಸುವರ್ಣ ಮುಂತಾದವು ಆಕರಜ ವಿಷಯ.

13. ರೂಪರಹಿತವೂ ಸ್ಪರ್ಶಯುಕ್ತವೂ ಆದುದು ವಾಯು. ಅದು ನಿತ್ಯ ಮತ್ತು ಅನಿತ್ಯ ಎಂದು ಎರಡು ವಿಧ. ನಿತ್ಯವು ಪರಮಾಣುರೂಪಿ. ಅನಿತ್ಯವು ಕಾರ್ಯರೂಪಿ. ಶರೀರ, ಇಂದ್ರಿಯ, ವಿಷಯಭಿನ್ನತೆಯಿಂದ ಮತ್ತೆ ಮೂರು ವಿಧ. ಶರೀರವು ವಾಯು ಲೋಕದಲ್ಲಿದೆ. ಶರೀರದ ಎಲ್ಲೆಡೆ ಇರುವ, ಸ್ಪರ್ಶವನ್ನು ಗ್ರಹಿಸುವ ತ್ವಚೆ ಇಂದ್ರಿಯ. ಮರ ಮುಂತಾದವುಗಳ ಕಂಪನಕ್ಕೆ ಕಾರಣವಾದುದು ವಿಷಯ. ದೇಹದ ಒಳಗಡೆ ಸಂಚರಿಸುವ ವಾಯುವು ಪ್ರಾಣ. ಅದು ಒಂದೇ ಆಗಿದ್ದರೂ ಆಶ್ರಯಭೇದದಿಂದ ಪ್ರಾಣ, ಅಪಾನ ಮುಂತಾದ ಹೆಸರನ್ನು ಪಡೆಯುತ್ತದೆ.

14. ಶಬ್ದವನ್ನು ಗುಣವಾಗಿ ಹೊಂದಿರುವುದು ಆಕಾಶ. ಅದು ಏಕವೂ ವಿಭುವೂ ನಿತ್ಯವೂ ಆಗಿದೆ.

ಭೂತ, ವರ್ತಮಾನಾದಿ ವ್ಯವಹಾರಕ್ಕೆ ಕಾರಣವಾದುದು ಕಾಲ. ಅದು ಏಕವೂ ವಿಭುವೂ ನಿತ್ಯವೂ ಆಗಿದೆ.

ಪೂರ್ವ ಮುಂತಾದ ವ್ಯವಹಾರಕ್ಕೆ ಕಾರಣವಾದುದು ದಿಕ್. ಅದು ಏಕವೂ ವಿಭುವೂ ನಿತ್ಯವೂ ಆಗಿದೆ.

15. ಜ್ಞಾನಕ್ಕೆ ಆಶ್ರಯವಾದವನು ಆತ್ಮಾ. ಆತ್ಮನು ಪರಮಾತ್ಮಾ ಮತ್ತು ಜೀವಾತ್ಮಾ ಎಂದು ಎರಡು ವಿಧ. ಅವುಗಳಲ್ಲಿ ಪರಮಾತ್ಮನು ಈಶ್ವರನೂ ಸರ್ವಜ್ಞನೂ ಮತ್ತು ಏಕನೂ ಆಗಿರುತ್ತಾನೆ. ಜೀವಾತ್ಮನು ಪ್ರತಿಯೊಂದು ದೇಹದಲ್ಲಿಯೂ ಬೇರೆಯಾಗಿದ್ದು ವಿಭುವೂ ನಿತ್ಯನೂ ಆಗಿದ್ದಾನೆ.

16. ಸುಖ ಮುಂತಾದವುಗಳ ಸಾಕ್ಷಾತ್ಕಾರಕ್ಕೆ ಸಾಧನವಾದುದೂ ಇಂದ್ರಿಯವೂ ಆದುದು ಮನಸ್. ಅದು ಪ್ರತಿಯೊಂದು ಆತ್ಮದಲ್ಲಿ ಇರುವುದರಿಂದ ಅನಂತವೂ ಪರಮಾಣುರೂಪಿಯೂ ಮತ್ತು ನಿತ್ಯವೂ ಆಗಿದೆ.

17. ಚಕ್ಷುವಿನಿಂದ ಮಾತ್ರ ಗ್ರಾಹ್ಯವಾದುದೂ ಗುಣವೂ ಆದುದು ರೂಪ. ಅದು ಬಿಳಿ, ಕಪ್ಪು, ಹಳದಿ, ಕೆಂಪು, ಹಸಿರು, ಕಂದು ಮತ್ತು ಮಿಶ್ರ ಎಂದು ಏಳು ವಿಧ. ಅದು ಪೃಥಿವೀ, ಜಲ ಮತ್ತು ತೇಜಸ್ಸಿನಲ್ಲಿ ಇರುತ್ತದೆ. ಪೃಥಿವಿಯಲ್ಲಿ ಏಳು ವಿಧವೂ ಜಲದಲ್ಲಿ ಅಭಾಸ್ವರಶುಕ್ಲವೂ ತೇಜಸ್ಸಿನಲ್ಲಿ ಭಾಸ್ವರಶುಕ್ಲವೂ ಇರುತ್ತದೆ.

18. ರಸನಗ್ರಾಹ್ಯವಾದುದೂ ಗುಣವೂ ಆದುದು ರಸ. ಅದು ಸಿಹಿ, ಹುಳಿ, ಉಪ್ಪು, ಖಾರ, ಒಗರು ಮತ್ತು ಕಹಿ ಎಂದು ಆರು ವಿಧ. ಅದು ಪೃಥಿವೀ ಮತ್ತು ಜಲದಲ್ಲಿ ಇರುತ್ತದೆ. ಪೃಥಿವಿಯಲ್ಲಿ ಆರು ವಿಧವೂ ಜಲದಲ್ಲಿ ಮಧುರ ಮಾತ್ರವೂ ಇರುತ್ತದೆ.

19. ಘ್ರಾಣದಿಂದ ಗ್ರಾಹ್ಯವಾದುದೂ ಗುಣವೂ ಆದುದು ಗಂಧ. ಅದು ಸುರಭಿ ಮತ್ತು ಅಸುರಭಿ ಎಂದು ಎರಡು ವಿಧವಾಗಿದ್ದು ಪೃಥಿವಿಯಲ್ಲಿ ಮಾತ್ರ ಇರುತ್ತದೆ.

20. ಚರ್ಮೇಂದ್ರಿಯದಿಂದ ಮಾತ್ರ ಗ್ರಾಹ್ಯವಾದುದೂ ಗುಣವೂ ಆದುದು ಸ್ಪರ್ಶ. ಅದು ಶೀತ, ಉಷ್ಣ ಮತ್ತು ಅನುಷ್ಣಾಶೀತ ಎಂದು ತ್ರಿವಿಧವಾಗಿದ್ದು ಪೃಥಿವೀ, ಜಲ ಮತ್ತು ವಾಯುಗಳಲ್ಲಿರುತ್ತದೆ. ಶೀತವು ಜಲದಲ್ಲಿಯೂ, ಉಷ್ಣವು ತೇಜಸ್ಸಿನಲ್ಲಿಯೂ, ಅನುಷ್ಣಾಶೀತವು ಪೃಥಿವೀ-ವಾಯುಗಳಲ್ಲಿಯೂ ಇರುತ್ತದೆ.

21. ರೂಪ ಮುಂತಾದ ಈ ನಾಲ್ಕು ಪೃಥಿವಿಯಲ್ಲಿ ಪಾಕಜನ್ಯವಾಗಿ ಅನಿತ್ಯವಾಗಿರುತ್ತವೆ. ಉಳಿದೆಡೆ ಪಾಕಜನ್ಯವಾಗದೇ ನಿತ್ಯವೂ ಅನಿತ್ಯವೂ ಆಗಿರುತ್ತವೆ. ನಿತ್ಯದಲ್ಲಿರುವವು ನಿತ್ಯವೂ, ಅನಿತ್ಯದಲ್ಲಿರುವವು ಅನಿತ್ಯವೂ ಆಗಿರುತ್ತವೆ.

22. ಏಕತ್ವ ಮುಂತಾದ ವ್ಯವಹಾರಕ್ಕೆ ಕಾರಣವಾದುದು ಸಂಖ್ಯಾ. ಏಕತ್ವದಿಂದ ಪರಾರ್ಧದವರೆಗೆ ಇರುವ ಇದು ನವದ್ರವ್ಯಗಳಲ್ಲಿ ಇರುತ್ತದೆ. ಏಕತ್ವವು ನಿತ್ಯ ಮತ್ತು ಅನಿತ್ಯ ಆಗಿದೆ. ನಿತ್ಯದಲ್ಲಿರುವುದು ನಿತ್ಯ, ಅನಿತ್ಯದಲ್ಲಿರುವುದು ಅನಿತ್ಯ. ದ್ವಿತ್ವ ಮುಂತಾದವು ಎಲ್ಲೆಡೆಯೂ ಅನಿತ್ಯವೇ.

23. ಅಳತೆಯ ವ್ಯವಹಾರಕ್ಕೆ ಕಾರಣವಾದುದು ಪರಿಮಾಣ. ಇದು ಒಂಬತ್ತು ದ್ರವ್ಯಗಳಲ್ಲಿಯೂ ಇರುತ್ತದೆ. ಇದು ಅಣು, ಮಹತ್, ದೀರ್ಘ ಮತ್ತು ಹ್ರಸ್ವ ಎಂದು ನಾಲ್ಕು ವಿಧವಾಗಿದೆ.

'ಒಂದು ಇನ್ನೊಂದರಿಂದ ಬೇರೆಯಾಗಿದೆ' ಎಂಬ ವ್ಯವಹಾರಕ್ಕೆ ಕಾರಣವಾದುದು ಪೃಥಕ್ತ್ವ. ಇದು ಸಕಲದ್ರವ್ಯಗಳಲ್ಲಿಯೂ ಇರುತ್ತದೆ.

24. 'ಒಂದು ಇನ್ನೊಂದರೊಡನೆ ಕೂಡಿಕೊಂಡಿದೆ' ಎಂಬ ವ್ಯವಹಾರಕ್ಕೆ ಕಾರಣವಾದುದು ಸಂಯೋಗ. ಇದು ಎಲ್ಲ ದ್ರವ್ಯಗಳಲ್ಲಿಯೂ ಇರುತ್ತದೆ.
ಸಂಯೋಗವನ್ನು ನಾಶಮಾಡುವುದೂ ಗುಣವೂ ಆದುದು ವಿಭಾಗ. ಇದು ಎಲ್ಲ ದ್ರವ್ಯಗಳಲ್ಲಿಯೂ ಇರುತ್ತದೆ.

25. ಪರ ಮತ್ತು ಅಪರ ಎಂಬ ವ್ಯವಹಾರಕ್ಕೆ ಅಸಾಧಾರಣಕಾರಣವಾದುದು ಪರತ್ವಾಪರತ್ವ. ಪೃಥಿವೀ ಮುಂತಾದ ನಾಲ್ಕರಲ್ಲಿಯೂ ಮನಸ್ಸಿನಲ್ಲಿಯೂ ಇರುತ್ತದೆ. ಪರತ್ವಾಪರತ್ವಗಳು ದಿಕ್‌ಕೃತ ಮತ್ತು ಕಾಲಕೃತ ಎಂದು ಎರಡು ವಿಧ. ದೂರವಿರುವುದರಲ್ಲಿ ದಿಕ್‌ಕೃತವಾದ ಪರತ್ವವೂ, ಸಮೀಪದಲ್ಲಿರುವುದರಲ್ಲಿ ದಿಕ್‌ಕೃತವಾದ ಅಪರತ್ವವೂ ಇರುತ್ತದೆ. ಹಿರಿಯದರಲ್ಲಿ ಕಾಲಕೃತವಾದ ಪರತ್ವವೂ, ಕಿರಿಯದರಲ್ಲಿ ಕಾಲಕೃತವಾದ ಅಪರತ್ವವೂ ಇರುತ್ತದೆ.

26. ಬೀಳುವಿಕೆಯ ಮೊದಲ ಕ್ರಿಯೆಗೆ ಅಸಮವಾಯಿಕಾರಣವಾದುದು ಗುರುತ್ವ. ಇದು ಪೃಥಿವೀ ಮತ್ತು ಜಲದಲ್ಲಿ ಇರುತ್ತದೆ.
ಹರಿಯುವಿಕೆಯ ಪ್ರಥಮಕ್ರಿಯೆಗೆ ಅಸಮವಾಯಿಕಾರಣವಾದುದು ದ್ರವತ್ವ. ಇದು ಪೃಥಿವೀ, ಜಲ ಮತ್ತು ತೇಜಸ್ಸುಗಳಲ್ಲಿ ಇರುತ್ತದೆ. ಅದು ಸಾಂಸಿದ್ಧಿಕ ಮತ್ತು ನೈಮಿತ್ತಿಕ ಎಂದು ಎರಡು ವಿಧ. ಸಾಂಸಿದ್ಧಿಕವು ಜಲದಲ್ಲಿಯೂ ನೈಮಿತ್ತಿಕವು ಪೃಥಿವೀ-ತೇಜಸ್ಸುಗಳಲ್ಲಿಯೂ ಇರುತ್ತದೆ. ಪೃಥಿವಿಯಲ್ಲಿ ತುಪ್ಪ ಮುಂತಾದವುಗಳ ದ್ರವತ್ವವು ಅಗ್ನಿಯ ಸಂಯೋಗದಿಂದ ಉಂಟಾಗುತ್ತದೆ. ತೇಜಸ್ಸಿನಲ್ಲಿ ಸುವರ್ಣ ಮುಂತಾದವು ಗಳಲ್ಲಿ (ಅಗ್ನಿಸಂಯೋಗದಿಂದ ದ್ರವತ್ವ ಉಂಟಾಗುತ್ತದೆ).

27. ಹಿಟ್ಟು ಮುಂತಾದವುಗಳಲ್ಲಿ ಮುದ್ದೆ ಮಾಡುವುದಕ್ಕೆ ಕಾರಣವಾದುದೂ ಗುಣವೂ ಆದುದು ಸ್ನೇಹ. ಇದು ಜಲದಲ್ಲಿ ಮಾತ್ರವಿರುತ್ತದೆ.

28. ಶ್ರೋತ್ರೇಂದ್ರಿಯದಿಂದ ಗ್ರಾಹ್ಯವಾದುದೂ ಗುಣವೂ ಆದುದು ಶಬ್ದ. ಇದು ಆಕಾಶದಲ್ಲಿ ಮಾತ್ರ ಇರುತ್ತದೆ. ಧ್ವನ್ಯಾತ್ಮಕ ಮತ್ತು ವರ್ಣಾತ್ಮಕ ಎಂದು ಇದರಲ್ಲಿ ಎರಡು ಪ್ರಕಾರ. ಧ್ವನ್ಯಾತ್ಮಕವು ನಗಾರಿ ಮುಂತಾದವುಗಳಲ್ಲಿದ್ದರೆ ವರ್ಣಾತ್ಮಕವು ಸಂಸ್ಕೃತ ಮುಂತಾದ ಭಾಷೆಗಳ ರೂಪವನ್ನು ಹೊಂದಿರುತ್ತದೆ.

29. ಎಲ್ಲ ವ್ಯವಹಾರಗಳಿಗೆ ಕಾರಣವಾದ ಜ್ಞಾನವೇ ಬುದ್ಧಿ. ಅದು ಸ್ಮೃತಿ ಮತ್ತು ಅನುಭವ ಎಂದು ಎರಡು ವಿಧ.
ಸಂಸ್ಕಾರದಿಂದ ಮಾತ್ರ ಜನಿಸುವುದೂ ಮತ್ತು ಜ್ಞಾನವೂ ಆದುದು ಸ್ಮೃತಿ. ಅದರಿಂದ ಭಿನ್ನವಾದ ಜ್ಞಾನವೇ ಅನುಭವ. ಅನುಭವವು ಯಥಾರ್ಥ ಮತ್ತು ಅಯಥಾರ್ಥ ಎಂದು ಎರಡು ವಿಧ. ಒಂದು ಧರ್ಮವನ್ನು ಹೊಂದಿರುವುದರಲ್ಲಿ ಆ ಧರ್ಮವೇ

ಪ್ರಕಾರವಾಗಿರುವ ಅನುಭವವೇ ಯಥಾರ್ಥ. ರಜತದಲ್ಲಿ ಇದು ರಜತ ಎಂಬ ಜ್ಞಾನ ಯಥಾರ್ಥ. ಇದನ್ನೇ ಪ್ರಮಾ ಎನ್ನುತ್ತಾರೆ. ಒಂದು ಧರ್ಮದ ಅಭಾವವಿರುವುದರಲ್ಲಿ ಆ ಧರ್ಮವೇ ಪ್ರಕಾರವಾಗಿರುವ ಅನುಭವವೇ ಅಯಥಾರ್ಥ. ಶುಕ್ತಿಯಲ್ಲಿ ಇದು ರಜತ ಎಂಬ ಜ್ಞಾನವು ಅಯಥಾರ್ಥ.

ಪ್ರತ್ಯಕ್ಷ, ಅನುಮಿತಿ, ಉಪಮಿತಿ ಮತ್ತು ಶಾಬ್ದ ಎಂದು ಯಥಾರ್ಥ ಅನುಭವವು ನಾಲ್ಕು ವಿಧ. ಯಥಾರ್ಥಾನುಭವದ ಕರಣವೂ ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದ ಎಂದು ಚತುರ್ವಿಧವಾಗಿದೆ.

30. ಅಸಾಧಾರಣವಾದ ಕಾರಣವೇ ಕರಣ. ಕಾರಣವೆಂದರೆ ಕಾರ್ಯಕ್ಕೆ ನಿಯತವಾಗಿ ಮೊದಲು ಇರುವುದು. ಪ್ರಾಗಭಾವಕ್ಕೆ ಪ್ರತಿಯೋಗಿಯಾಗಿರುವುದೇ ಕಾರ್ಯ. ಕಾರಣವು ಸಮವಾಯಿ, ಅಸಮವಾಯಿ ಮತ್ತು ನಿಮಿತ್ತ ಎಂದು ಮೂರು ವಿಧ. ಯಾವುದರಲ್ಲಿ ತಾನು ಸಮವಾಯಸಂಬಂಧದಿಂದ ಇದ್ದು ಕಾರ್ಯವನ್ನು ಉತ್ಪಾದಿಸುವುದೋ ಅದು ಸಮವಾಯಿಕಾರಣ. ತಂತುಗಳು ಪಟಕ್ಕೆ ಮತ್ತು ಪಟವು ತನ್ನ ರೂಪಾದಿಗಳಿಗೆ ಸಮವಾಯಿಕಾರಣ.

ಯಾವುದು ಕಾರ್ಯದೊಡನೆ ಅಥವಾ ಕಾರಣದೊಡನೆ ಒಂದು ಅಧಿಕರಣದಲ್ಲಿ ಸಮವಾಯಸಂಬಂಧದಿಂದ ಇದ್ದು ಕಾರಣವಾಗಿರುವುದೋ ಅದು ಅಸಮವಾಯಿ ಕಾರಣ. ತಂತುಸಂಯೋಗವು ಪಟಕ್ಕೆ, ತಂತುರೂಪವು ಪಟರೂಪಕ್ಕೆ ಅಸಮವಾಯಿ ಕಾರಣ. ಈ ಎರಡರಿಂದ ಭಿನ್ನವಾದ ಕಾರಣವು ನಿಮಿತ್ತಕಾರಣ. ಪಟಕ್ಕೆ ಲಾಳಿ, ಮಗ್ಗ ಮುಂತಾದವು ನಿಮಿತ್ತಕಾರಣ. ಈ ಮೂರು ಕಾರಣಗಳಲ್ಲಿ ಯಾವುದು ಅಸಾಧಾರಣಕಾರಣವೋ ಅದೇ ಕರಣ.

31. ಯಥಾರ್ಥಾನುಭವದಲ್ಲಿ ಪ್ರತ್ಯಕ್ಷಜ್ಞಾನಕ್ಕೆ ಕರಣವಾದುದು ಪ್ರತ್ಯಕ್ಷ. ಇಂದ್ರಿಯ ಮತ್ತು ವಿಷಯಗಳ ನಡುವಿನ ಸಂಬಂಧದಿಂದ ಉಂಟಾಗುವ ಜ್ಞಾನವೇ ಪ್ರತ್ಯಕ್ಷ. ಅದು ಸವಿಕಲ್ಪಕ ಮತ್ತು ನಿರ್ವಿಕಲ್ಪಕ ಎಂದು ಎರಡು ವಿಧ. ಪ್ರಕಾರರಹಿತವಾದ ಜ್ಞಾನವೇ ನಿರ್ವಿಕಲ್ಪಕ. 'ಇದು ಏನೋ ಆಗಿದೆ' ಎಂಬ ಜ್ಞಾನವು ನಿರ್ವಿಕಲ್ಪಕ. ಪ್ರಕಾರ ಸಹಿತವಾದ ಜ್ಞಾನವು ಸವಿಕಲ್ಪಕ. ಇವನು ಡಿತ್ಥ, ಇವನು ಬ್ರಾಹ್ಮಣ, ಇವನು ಶ್ಯಾಮ, ಇವನು ಪಾಚಕ ಎಂಬಿವೇ ಜ್ಞಾನಗಳು ಸವಿಕಲ್ಪಕ.

ಪ್ರತ್ಯಕ್ಷಜ್ಞಾನಕ್ಕೆ ಕಾರಣವಾದ ಇಂದ್ರಿಯ ಮತ್ತು ವಿಷಯಗಳ ನಡುವಿನ ಸಂಬಂಧವು ಸಂಯೋಗ, ಸಂಯುಕ್ತಸಮವಾಯ, ಸಂಯುಕ್ತಸಮವೇತಸಮವಾಯ, ಸಮವಾಯ, ಸಮವೇತಸಮವಾಯ ಮತ್ತು ವಿಶೇಷಣವಿಶೇಷ್ಯಭಾವ ಎಂದು ಆರು ವಿಧವಾಗಿದೆ. ಕಣ್ಣಿನಿಂದ ಘಟದ ಪ್ರತ್ಯಕ್ಷವಾಗುವಲ್ಲಿ ಸಂಯೋಗವು ಸನ್ನಿಕರ್ಷ. ಚಕ್ಷುಃಸಂಯುಕ್ತ

ಘಟದಲ್ಲಿ ರೂಪವು ಸಮವಾಯದಿಂದ ಇರುವುದರಿಂದ ಘಟದ ರೂಪ ಪ್ರತ್ಯಕ್ಷವಾಗುವಲ್ಲಿ ಸಂಯುಕ್ತಸಮವಾಯವು ಸನ್ನಿಕರ್ಷವಾಗುತ್ತದೆ. ಚಕ್ಷುಸಂಯುಕ್ತ-ವಾದ ಘಟದಲ್ಲಿ ರೂಪವು ಸಮವಾಯದಿಂದ ಇದ್ದು ರೂಪದಲ್ಲಿ ರೂಪತ್ವವು ಸಮವಾಯದಿಂದ ಇರುವುದರಿಂದ ರೂಪತ್ವ ಎಂಬ ಸಾಮಾನ್ಯವು ಪ್ರತ್ಯಕ್ಷವಾಗುವಲ್ಲಿ ಸಂಯುಕ್ತಸಮವೇತಸಮವಾಯವು ಸನ್ನಿಕರ್ಷವಾಗುತ್ತದೆ. ಶ್ರೋತ್ರೇಂದ್ರಿಯದಿಂದ ಶಬ್ದದ ಪ್ರತ್ಯಕ್ಷವಾಗುವಲ್ಲಿ ಸಮವಾಯವು ಸನ್ನಿಕರ್ಷ. ಶ್ರೋತ್ರೇಂದ್ರಿಯವೆಂದರೆ ಕಿವಿಯ ರಂಧ್ರದಲ್ಲಿರುವ ಆಕಾಶ. ಶಬ್ದವು ಆಕಾಶದ ಗುಣವಾದುದರಿಂದ ಗುಣ- ಗುಣಿಗಳ ನಡುವೆ ಸಮವಾಯವಿದೆ. ಶ್ರೋತ್ರೇಂದ್ರಿಯದಲ್ಲಿ ಸಮವಾಯದಿಂದ ಇರುವ ಶಬ್ದದಲ್ಲಿ ಶಬ್ದತ್ವವು ಸಮವಾಯದಿಂದ ಇರುವುದರಿಂದ ಶಬ್ದತ್ವವು ಪ್ರತ್ಯಕ್ಷ- ವಾಗುವಲ್ಲಿ ಸಮವೇತಸಮವಾಯವು ಸನ್ನಿಕರ್ಷ. 'ಘಟಾಭಾವವನ್ನು ಹೊಂದಿದ ಭೂತಲ' ಎನ್ನುವಲ್ಲಿ ಚಕ್ಷುವಿನಿಂದ ಸಂಯುಕ್ತವಾದ ಭೂತಲದಲ್ಲಿ ಘಟಾಭಾವವು ವಿಶೇಷಣವಾಗಿರುವುದರಿಂದ ಅಭಾವ ಪ್ರತ್ಯಕ್ಷದಲ್ಲಿ ವಿಶೇಷಣ-ವಿಶೇಷ್ಯಭಾವವು ಸನ್ನಿಕರ್ಷವಾಗಿದೆ. ಹೀಗೆ ಆರು ವಿಧ ಸನ್ನಿಕರ್ಷಗಳಿಂದ ಉಂಟಾದ ಜ್ಞಾನವು ಪ್ರತ್ಯಕ್ಷ. ಇಂದ್ರಿಯವು ಅದಕ್ಕೆ ಕರಣವಾಗಿದೆ. ಆದ್ದರಿಂದ ಇಂದ್ರಿಯವೇ ಪ್ರತ್ಯಕ್ಷಪ್ರಮಾಣ ಎಂದು ಸಿದ್ಧವಾಗುತ್ತದೆ.

32. ಅನುಮಿತಿಗೆ ಕರಣವಾದುದು ಅನುಮಾನ. ಪರಾಮರ್ಶದಿಂದ ಜನಿಸುವ ಜ್ಞಾನವೇ ಅನುಮತಿ. ವ್ಯಾಪ್ತಿಯಿಂದ ವಿಶಿಷ್ಟವಾದ ಪಕ್ಷಧರ್ಮತಾಜ್ಞಾನವೇ ಪರಾಮರ್ಶ. ಉದಾಹರಣೆಗೆ, 'ಈ ಪರ್ವತವು ವಹ್ನಿಯಿಂದ ವ್ಯಾಪ್ಯವಾದ ಧೂಮವನ್ನು ಹೊಂದಿದೆ' ಎಂಬ ಜ್ಞಾನವು ಪರಾಮರ್ಶ. ಅದರಿಂದ ಜನಿಸಿದ 'ಪರ್ವತವು ವಹ್ನಿಯನ್ನು ಹೊಂದಿದೆ' ಎಂಬ ಜ್ಞಾನವು ಅನುಮಿತಿ. 'ಎಲ್ಲೆಲ್ಲಿ ಧೂಮವೋ ಅಲ್ಲಲ್ಲಿ ಅಗ್ನಿ' ಎಂಬ ಸಾಹಚರ್ಯನಿಯಮವೇ ವ್ಯಾಪ್ತಿ. ಪರ್ವತಾದಿಗಳಲ್ಲಿ ವ್ಯಾಪ್ಯದ ಇರುವಿಕೆಯೇ ಪಕ್ಷಧರ್ಮತಾ.

ಅನುಮಾನವು ಸ್ವಾರ್ಥ ಮತ್ತು ಪರಾರ್ಥ ಎಂದು ಎರಡು ವಿಧ. ತನಗೆ ಅನುಮಿತಿ ಉಂಟಾಗಲು ಕಾರಣವಾದುದು ಸ್ವಾರ್ಥಾನುಮಾನ. ಹೇಗೆಂದರೆ—ಸ್ವತಃ ಅಡುಗೆ ಮನೆ ಮುಂತಾದವುಗಳಲ್ಲಿ ಅನೇಕ ಸಲ ನೋಡುವಿಕೆಯಿಂದ 'ಎಲ್ಲಿ ಧೂಮವೋ ಅಲ್ಲಿ ಅಗ್ನಿ' ಎಂಬ ವ್ಯಾಪ್ತಿಯನ್ನು ಪಡೆದುಕೊಂಡು ಪರ್ವತಕ್ಕೆ ಹೋಗಲು ಆ ಪರ್ವತ-ದಲ್ಲಿಯ ಅಗ್ನಿಯನ್ನು ಸಂದೇಹಿಸುವವನಾಗಿ, ಪರ್ವತದಲ್ಲಿ ಧೂಮವನ್ನು ಕಾಣುತ್ತ 'ಎಲ್ಲಿ ಧೂಮವೋ ಅಲ್ಲಿ ಅಗ್ನಿ' ಎಂಬ ವ್ಯಾಪ್ತಿಯನ್ನು ಸ್ಮರಿಸುತ್ತಾನೆ. ಬಳಿಕ 'ಈ ಪರ್ವತವು ಅಗ್ನಿಯಿಂದ ವ್ಯಾಪ್ಯವಾದ ಧೂಮವನ್ನು ಹೊಂದಿರುವುದು' ಎಂಬ ಜ್ಞಾನವು ಉಂಟಾಗುತ್ತದೆ. ಇದನ್ನೇ 'ಲಿಂಗಪರಾಮರ್ಶ' ಎನ್ನುತ್ತಾರೆ. ಅದರಿಂದ 'ಪರ್ವತವು

ಅಗ್ನಿಯಿಂದ ಕೂಡಿದೆ' ಎಂಬ ಅನುಮಿತಿ ಉಂಟಾಗುತ್ತದೆ. ಹೀಗೆ ಇದು ಸ್ವಾರ್ಥಾನುಮಾನ.

33. ಯಾವಾಗ ಧೂಮದಿಂದ ಅಗ್ನಿಯನ್ನು ಸ್ವತಃ ಅನುಮಾನಿಸಿಕೊಂಡು, ಬೇರೊಬ್ಬನಿಗೆ ಬೋಧಿಸುವುದಕ್ಕಾಗಿ ಪಂಚಾವಯವ ವಾಕ್ಯಗಳನ್ನು ಪ್ರಯೋಗಿಸಲಾಗುವುದೋ ಅದು ಪರಾರ್ಥಾನುಮಾನ. ಉದಾಹರಣೆಗಾಗಿ—ಪರ್ವತವು ಅಗ್ನಿಯಿಂದ ಕೂಡಿದೆ, ಧೂಮವಿರುವುದರಿಂದ. ಯಾವಯಾವುದು ಧೂಮ ಉಳ್ಳದ್ದೋ ಅದು ಅಗ್ನಿಯುಳ್ಳದ್ದು. ಅಡುಗೆಮನೆಯಂತೆ. ಅದೇ ರೀತಿ ಇದು. ಆದ್ದರಿಂದ ಹಾಗೆ. ಹೀಗೆ ಪ್ರತಿಪಾದಿಸಲ್ಪಟ್ಟ ಲಿಂಗದಿಂದ ಬೇರೊಬ್ಬನೂ ಅಗ್ನಿಯ ಜ್ಞಾನವನ್ನು ಹೊಂದುತ್ತಾನೆ.

ಪ್ರತಿಜ್ಞಾ, ಹೇತು, ಉದಾಹರಣ, ಉಪನಯ ಮತ್ತು ನಿಗಮನ ಇವು ಪಂಚ ಅವಯವಗಳು. 'ಪರ್ವತವು ಅಗ್ನಿಯಿಂದ ಕೂಡಿದೆ' ಎಂಬುದು ಪ್ರತಿಜ್ಞೆ. 'ಧೂಮವನ್ನು ಹೊಂದಿರುವುದರಿಂದ' ಎಂಬುದು ಹೇತು. 'ಯಾವಯಾವುದು ಧೂಮ-ವುಳ್ಳದ್ದೋ ಅದೆಲ್ಲ ಅಗ್ನಿಯುಳ್ಳದ್ದು, ಅಡುಗೆಮನೆಯಂತೆ' ಎಂಬುದು ಉದಾಹರಣ. 'ಇದು ಹಾಗೆಯೇ' ಎಂಬುದು ಉಪನಯ. 'ಆದ್ದರಿಂದ ಹಾಗೆ' ಎಂಬುದು ನಿಗಮನ.

34. ಸ್ವಾರ್ಥಾನುಮಿತಿ ಮತ್ತು ಪರಾರ್ಥಾನುಮಿತಿಗಳಿಗೆ ಲಿಂಗಪರಾಮರ್ಶವೇ ಕರಣವಾಗಿರುತ್ತದೆ. ಆದ್ದರಿಂದ ಲಿಂಗಪರಾಮರ್ಶವೇ ಅನುಮಾನ.

ಅನ್ವಯವ್ಯತಿರೇಕಿ, ಕೇವಲಾನ್ವಯಿ ಮತ್ತು ಕೇವಲವ್ಯತಿರೇಕಿ ಎಂದು ಲಿಂಗವು ಮೂರು ವಿಧ. ಅನ್ವಯವ್ಯಾಪ್ತಿ ಮತ್ತು ವ್ಯತಿರೇಕವ್ಯಾಪ್ತಿಯಿಂದ ಕೂಡಿರುವುದು ಅನ್ವಯ ವ್ಯತಿರೇಕಿ. ಉದಾಹರಣೆಗೆ—ಅಗ್ನಿಯನ್ನು ಸಾಧಿಸುವಲ್ಲಿ ಧೂಮವತ್ತ್ವವು ಅನ್ವಯ ವ್ಯತಿರೇಕಿ. 'ಎಲ್ಲಿ ಧೂಮವೋ ಅಲ್ಲಿ ಅಗ್ನಿ, ಅಡುಗೆಮನೆಯಂತೆ' ಎಂಬುದು ಅನ್ವಯವ್ಯಾಪ್ತಿ. 'ಎಲ್ಲಿ ಅಗ್ನಿ ಇಲ್ಲವೋ ಅಲ್ಲಿ ಧೂಮವೂ ಇಲ್ಲ, ಸರೋವರದಂತೆ' ಎಂಬುದು ವ್ಯತಿರೇಕವ್ಯಾಪ್ತಿ. ಅನ್ವಯವ್ಯಾಪ್ತಿಯನ್ನು ಮಾತ್ರ ಹೊಂದಿರುವಂತಹದು ಕೇವಲಾನ್ವಯಿ. ಉದಾಹರಣೆಗೆ—ಘಟವು ಅಭಿಧೇಯವಾಗಿದೆ, ಪ್ರಮೇಯತ್ವದಿಂದ, ಪಟದಂತೆ. ಎಲ್ಲವೂ ಪ್ರಮೇಯಗಳೂ ಅಭಿಧೇಯಗಳೂ ಆಗಿರುವುದರಿಂದ ಇಲ್ಲಿ ಪ್ರಮೇಯತ್ವ ಅಭಿದೇ- ಯತ್ವಗಳಿಗೆ ವ್ಯತಿರೇಕವ್ಯಾಪ್ತಿಯಿಲ್ಲ. ವ್ಯತಿರೇಕವ್ಯಾಪ್ತಿಯನ್ನು ಮಾತ್ರ ಹೊಂದಿರುವುದು ಕೇವಲ ವ್ಯತಿರೇಕಿ. ಉದಾಹರಣೆಗೆ—ಪೃಥಿವಿಯು ಇತರವುಗಳಿಂದ ಭಿನ್ನವಾಗಿದೆ, ಗಂಧವತ್ತ್ವದಿಂದ. ಯಾವುದು ಇತರವುಗಳಿಂದ ಭಿನ್ನವಾಗಿಲ್ಲವೋ ಅದು ಗಂಧವನ್ನೂ ಹೊಂದಿಲ್ಲ. ಜಲದಂತೆ, ಇದು ಹಾಗಲ್ಲ, ಆದ್ದರಿಂದ ಇದು ಅದರಂತೆ ಅಲ್ಲ. ಇಲ್ಲಿ ಪೃಥಿವಿಯು ಮಾತ್ರ ಪಕ್ಷವಾಗಿರುವುದರಿಂದ ಯಾವುದು ಗಂಧವನ್ನು ಹೊಂದಿದೆಯೋ ಅದು ಇತರವುಗಳಿಂದ ಭಿನ್ನವಾದದ್ದು ಎಂಬ ಅನ್ವಯದೃಷ್ಟಾಂತವು ಇಲ್ಲ.

35. ಯಾವುದರಲ್ಲಿ ಸಾಧ್ಯವು ಸಂದಿಗ್ಧವಾಗಿದೆಯೋ ಅದು ಪಕ್ಷ. ಉದಾಹರಣೆಗೆ— ಧೂಮವತ್ತ್ವವು ಹೇತುವಾದಾಗ ಪರ್ವತವು ಪಕ್ಷ. ಸಾಧ್ಯವನ್ನು ನಿಶ್ಚಿತವಾಗಿ ಹೊಂದಿರುವುದು ಸಪಕ್ಷ. ಅದೇ ಉದಾಹರಣೆಯಲ್ಲಿ ಅಡುಗೆಮನೆ. ಸಾಧ್ಯದ ಅಭಾವವನ್ನು ನಿಶ್ಚಿತವಾಗಿ ಹೊಂದಿರುವುದು ವಿಪಕ್ಷ. ಅದೇ ಉದಾಹರಣೆಯಲ್ಲಿ ಸರೋವರ.

36. ಸವ್ಯಭಿಚಾರ, ವಿರುದ್ಧ, ಸತ್ಪ್ರತಿಪಕ್ಷ, ಅಸಿದ್ಧ ಮತ್ತು ಬಾಧಿತ ಎಂದು ಹೇತ್ವಾಭಾಸಗಳು ಐದು ವಿಧ.

37. ಅನೇಕಾಂತಸಹಿತವಾದುದು ಸವ್ಯಭಿಚಾರ. ಅದು ಸಾಧಾರಣ, ಅಸಾಧಾರಣ ಮತ್ತು ಅನುಪಸಂಹಾರಿ ಎಂದು ಮೂರು ವಿಧವಾಗಿದೆ. ಅವುಗಳಲ್ಲಿ ಸಾಧ್ಯದ ಅಭಾವವಿರುವಲ್ಲಿಯೂ (ಹೇತು) ಇರುವಿಕೆ ಸಾಧಾರಣ. ಉದಾಹರಣೆಗೆ— 'ಪರ್ವತವು ಅಗ್ನಿಯಿಂದ ಕೂಡಿದೆ, ಪ್ರಮೇಯತ್ವ ಇರುವುದರಿಂದ'. ಪ್ರಮೇಯತ್ವವು ಅಗ್ನಿಯ ಅಭಾವವಿರುವ ಸರೋವರದಲ್ಲಿಯೂ ಇರುವುದರಿಂದ ಇದು ಸಾಧಾರಣ. ಎಲ್ಲ ಸಪಕ್ಷ-ವಿಪಕ್ಷಗಳಲ್ಲಿ ಇರದೇ ಪಕ್ಷದಲ್ಲಿ ಮಾತ್ರ ಇರುವುದು ಅಸಾಧಾರಣ. ಉದಾಹರಣೆಗೆ—ಶಬ್ದತ್ವವು ಎಲ್ಲ ನಿತ್ಯ ಮತ್ತು ಅನಿತ್ಯಗಳಲ್ಲಿ ಇರದೇ ಶಬ್ದದಲ್ಲಿ ಮಾತ್ರ ಇರುವುದರಿಂದ 'ಶಬ್ದವು ನಿತ್ಯವಾದುದು, ಶಬ್ದತ್ವದಿಂದ' ಎಂಬುದು ಅಸಾಧಾರಣ. ಅನ್ವಯ ಮತ್ತು ವ್ಯತಿರೇಕ ಉದಾಹರಣರಹಿತವಾದುದು ಅನುಪಸಂಹಾರಿ. ಉದಾಹರಣೆಗೆ— 'ಎಲ್ಲವೂ ಅನಿತ್ಯ, ಪ್ರಮೇಯತ್ವದಿಂದ'. ಇಲ್ಲಿ ಎಲ್ಲವೂ ಪಕ್ಷವೇ ಆಗಿರುವುದರಿಂದ ಉದಾಹರಣೆ ಇಲ್ಲ.

38. ಸಾಧ್ಯದ ಅಭಾವದಿಂದ ವ್ಯಾಪ್ತವಾದ ಹೇತುವು ವಿರುದ್ಧ. ಉದಾಹರಣೆಗೆ— 'ಶಬ್ದವು ನಿತ್ಯ, ಕೃತಕತ್ವದಿಂದ'. ಇಲ್ಲಿ ಕೃತಕತ್ವವು ನಿತ್ಯತ್ವದ ಅಭಾವವಾದ ಅನಿತ್ಯತ್ವದಿಂದ ವ್ಯಾಪ್ತವಾಗಿದೆ.

39. ಸಾಧ್ಯದ ಅಭಾವವನ್ನು ಸಾಧಿಸುವ ಬೇರೊಂದು ಹೇತುವು ಯಾವುದಕ್ಕೆ ಇರುವುದೋ ಅದು ಸತ್ಪ್ರತಿಪಕ್ಷ. ಉದಾಹರಣೆಗೆ— 'ಶಬ್ದವು ನಿತ್ಯವಾಗಿದೆ, ಶ್ರಾವಣತ್ವದಿಂದ, ಶಬ್ದತ್ವದಂತೆ; ಶಬ್ದವು ಅನಿತ್ಯವಾಗಿದೆ, ಕಾರ್ಯತ್ವದಿಂದ, ಘಟದಂತೆ.'

40. ಅಸಿದ್ಧವು ಆಶ್ರಯಾಸಿದ್ಧ, ಸ್ವರೂಪಾಸಿದ್ಧ ಮತ್ತು ವ್ಯಾಪ್ಯತ್ವಾಸಿದ್ಧ ಎಂದು ಮೂರು ವಿಧವಾಗಿದೆ. ಆಶ್ರಯಾಸಿದ್ಧದ ಉದಾಹರಣೆ: 'ಗಗನಕಮಲವು ಸುವಾಸನೆಯಿಂದ ಕೂಡಿದೆ, ಕಮಲತ್ವದಿಂದ, ಸರೋವರದ ಕಮಲದಂತೆ'. ಇಲ್ಲಿ ಗಗನಕಮಲವು ಆಶ್ರಯವಾಗಿದೆ. ಆದರೆ ಅದು ಇಲ್ಲವೇ ಇಲ್ಲ. ಸ್ವರೂಪಾಸಿದ್ಧದ ಉದಾಹರಣೆ: 'ಶಬ್ದವು ಅನಿತ್ಯ, ಚಾಕ್ಷುಷತ್ವದಿಂದ, ರೂಪದಂತೆ'. ಇಲ್ಲಿ ಶಬ್ದವು ಶ್ರಾವಣವಾದುದರಿಂದ ಚಾಕ್ಷುಷತ್ವವು ಶಬ್ದದಲ್ಲಿ ಇಲ್ಲ.

41. ಉಪಾಧಿಸಹಿತವಾದ ಹೇತುವು ವ್ಯಾಪ್ಯತ್ವಾಸಿದ್ಧ. ಸಾಧ್ಯಕ್ಕೆ ವ್ಯಾಪಕವಾಗಿದ್ದು ಸಾಧನಕ್ಕೆ ಅವ್ಯಾಪಕವಾಗಿರುವುದು ಉಪಾಧಿ. ಸಾಧ್ಯಕ್ಕೆ ಸಮಾನಾಧಿಕರಣದಲ್ಲಿರುವ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗದಿರುವುದು ಸಾಧ್ಯವ್ಯಾಪಕತ್ವ. ಸಾಧನವಿರುವಲ್ಲಿಯ ಅತ್ಯಂತಾಭಾವಕ್ಕೆ ಪ್ರತಿಯೋಗಿಯಾಗಿರುವುದು ಸಾಧನ ಅವ್ಯಾಪಕತ್ವ. ಉದಾಹರಣೆಗೆ—'ಪರ್ವತವು ಧೂಮವನ್ನು ಹೊಂದಿದೆ, ಅಗ್ನಿಯಿರುವುದರಿಂದ' ಎಂಬಲ್ಲಿ ಆರ್ದ್ರೇಂಧನಸಂಯೋಗವು ಉಪಾಧಿಯಾಗಿದೆ. ಹೇಗೆಂದರೆ—'ಎಲ್ಲಿ ಧೂಮವೋ ಅಲ್ಲಿ ಆರ್ದ್ರೇಂಧನಸಂಯೋಗ' ಎಂಬುದು ಸಾಧ್ಯವ್ಯಾಪಕತ್ವ. ಎಲ್ಲಿ ಅಗ್ನಿಯಿರುವುದೋ ಅಲ್ಲಿ ಆರ್ದ್ರೇಂಧನ ಸಂಯೋಗವಿಲ್ಲ, 'ಕಾದ ಕಬ್ಬಿಣದಲ್ಲಿ ಆರ್ದ್ರೇಂಧನಸಂಯೋಗದ ಅಭಾವದಿಂದ' ಎಂಬುದು ಸಾಧನದ ಅವ್ಯಾಪಕತ್ವ. ಹೀಗೆ ಸಾಧ್ಯವ್ಯಾಪಕವಾಗಿದ್ದು ಸಾಧನ ಅವ್ಯಾಪಕವಾದುದರಿಂದ ಆರ್ದ್ರೇಂಧನಸಂಯೋಗವು ಉಪಾಧಿಯಾಗಿದೆ. ಉಪಾಧಿಸಹಿತವಾದುದರಿಂದ 'ವಹ್ನಿಮತ್ತ್ವ' ಎಂಬ ಹೇತುವು ವ್ಯಾಪ್ಯತ್ವಾಸಿದ್ಧವಾಗಿದೆ.

42. ಯಾವುದರ ಸಾಧ್ಯದ ಅಭಾವವು ಬೇರೊಂದು ಪ್ರಮಾಣದಿಂದ ಸಾಧಿತವಾಗುವುದೋ ಅದು ಬಾಧಿತ. ಉದಾಹರಣೆಗೆ—'ಅಗ್ನಿಯು ಅನುಷ್ಣವಾಗಿದೆ, ದ್ರವ್ಯತ್ವದಿಂದ'. ಇಲ್ಲಿ ಅನುಷ್ಣತ್ವವು ಸಾಧ್ಯ. ಅದರ ಅಭಾವವಾದ ಉಷ್ಣತ್ವವು ಸ್ಪರ್ಶಪ್ರತ್ಯಕ್ಷದಿಂದ ಗ್ರಹಿಸಲ್ಪಡುತ್ತದೆಯಾಗಿ (ಹೇತುವು) ಬಾಧಿತವಾಗಿದೆ.

43. ಉಪಮಿತಿಗೆ ಕರಣವಾದುದು ಉಪಮಾನ. ಸಂಜ್ಞಾ ಮತ್ತು ಸಂಜ್ಞಿಗಳ ನಡುವಿನ ಸಂಬಂಧಜ್ಞಾನವೇ ಉಪಮಿತಿ. ಅದಕ್ಕೆ ಕರಣವಾದುದು ಸಾದೃಶ್ಯಜ್ಞಾನ. ಅತಿದೇಶ ವಾಕ್ಯಾರ್ಥವನ್ನು ಸ್ಮರಿಸುವಿಕೆ ಅವಾಂತರವಾದ ವ್ಯಾಪಾರವಾಗಿದೆ. ಉದಾಹರಣೆಗಾಗಿ, ಒಬ್ಬನು 'ಗವಯ' ಎಂಬ ಪದದ ಅರ್ಥವನ್ನು ಅರಿಯದೇ ಯಾವುದೋ ಅರಣ್ಯವಾಸಿಯಿಂದ 'ಗವಯವು ಗೋವಿಗೆ ಸದೃಶವಾದುದು' ಎಂದು ಕೇಳಿ ಅರಣ್ಯಕ್ಕೆ ಹೋದಾಗ ಗೋವಿಗೆ ಸದೃಶವಾದ ಪ್ರಾಣಿಯನ್ನು ನೋಡಿ ಆ ವಾಕ್ಯದ ಅರ್ಥವನ್ನು ಸ್ಮರಿಸುತ್ತಾನೆ. ಬಳಿಕ 'ಗವಯ' ಎಂಬ ಪದದಿಂದ ಬೋಧಿತವಾಗುವ ಪ್ರಾಣಿ ಇದೇ ಎಂಬ ಉಪಮಿತಿಯು ಉಂಟಾಗುತ್ತದೆ.

44. ಆಪ್ತವಾಕ್ಯವೇ ಶಬ್ದ. ಯಥಾರ್ಥವನ್ನು ನುಡಿಯುವವನೇ ಆಪ್ತ. 'ಹಸುವನ್ನು ಹೊಡೆದುಕೊಂಡು ಬಾ' ಮುಂತಾದ ಪದಗಳ ಸಮೂಹವೇ ವಾಕ್ಯ. ಶಕ್ತವಾದುದೇ ಪದ. ಈ ಪದದಿಂದ ಈ ಅರ್ಥವು ಬೋಧಿತವಾಗಬೇಕು ಎಂಬ ಈಶ್ವರಸಂಕೇತವೇ ಶಕ್ತಿ.

45. ವಾಕ್ಯಾರ್ಥಜ್ಞಾನಕ್ಕೆ ಕಾರಣವಾದುದು ಆಕಾಂಕ್ಷಾ, ಯೋಗ್ಯತಾ ಮತ್ತು ಸನ್ನಿಧಿ. ಸಂಬಂಧಿಸಿದ ಇನ್ನೊಂದು ಪದದ ಅನುಪಸ್ಥಿತಿಯಲ್ಲಿ ಒಂದು ಪದಕ್ಕೆ ಅರ್ಥವನ್ನು

ಬೋಧಿಸುವ ಸಾಮರ್ಥ್ಯವಿಲ್ಲದಿರುವಿಕೆಯೇ ಆಕಾಂಕ್ಷಾ. ಅರ್ಥಕ್ಕೆ ಬಾಧೆಯಿಲ್ಲದಿರು-ವುದೇ ಯೋಗ್ಯತೆ. ಪದಗಳನ್ನು (ಅನಗತ್ಯ) ವಿಳಂಬವಿಲ್ಲದೇ ಉಚ್ಚರಿಸುವಿಕೆಯೇ ಸನ್ನಿಧಿ. ಆಕಾಂಕ್ಷಾ ಮುಂತಾದವುಗಳಿಂದ ರಹಿತವಾದ ವಾಕ್ಯವು ಪ್ರಮಾಣವಲ್ಲ. ಆಕಾಂಕ್ಷೆ ಇಲ್ಲದಿರುವುದರಿಂದ 'ಹಸು ಕುದುರೆ ಮನುಷ್ಯ ಆನೆ' ಎಂಬುದು ಪ್ರಮಾಣವಲ್ಲ. 'ಅಗ್ನಿ-ಯಿಂದ ಸಿಂಪಡಿಸಬೇಕು' ಎಂಬುದು ಯೋಗ್ಯತೆ ಇಲ್ಲದಿರುವುದರಿಂದ ಪ್ರಮಾಣವಲ್ಲ. ಪ್ರತಿಯೊಂದು ಪ್ರಹರದಲ್ಲಿ ಸಂಬಂಧವಿಲ್ಲದಂತೆ ಉಚ್ಚರಿಸಲ್ಪಟ್ಟ 'ಹಸುವನ್ನು ತಾ' ಮುಂತಾದ ಪದಗಳು ಸಾನ್ನಿಧ್ಯದ ಅಭಾವದಿಂದ ಪ್ರಮಾಣವಾಗುವುದಿಲ್ಲ.

ವಾಕ್ಯವು ವೈದಿಕ ಮತ್ತು ಲೌಕಿಕ ಎಂದು ಎರಡು ವಿಧ. ಈಶ್ವರೋಕ್ತವಾದುದುರಿಂದ ವೈದಿಕವಾಕ್ಯಗಳೆಲ್ಲ ಪ್ರಮಾಣ. ಲೌಕಿಕವು ಆಪ್ತನಿಂದ ನುಡಿಯಲ್ಪಟ್ಟರೆ ಮಾತ್ರ ಪ್ರಮಾಣ. ಉಳಿದುದೆಲ್ಲ ಅಪ್ರಮಾಣ. ವಾಕ್ಯಾರ್ಥಜ್ಞಾನವೇ ಶಾಬ್ದಜ್ಞಾನ. ಅದಕ್ಕೆ ಕರಣವಾದುದು ಶಬ್ದ.

46. ಸಂಶಯ, ವಿಪರ್ಯಯ ಮತ್ತು ತರ್ಕ ಎಂದು ಅಯಥಾರ್ಥಾನುಭವವು ಮೂರು ವಿಧ. ಒಂದೇ ಧರ್ಮಿಯಲ್ಲಿ ವಿರುದ್ಧ ಧರ್ಮಗಳ ವೈಶಿಷ್ಟ್ಯವನ್ನು ಗ್ರಹಿಸಿದ ಜ್ಞಾನವೇ ಸಂಶಯ. ಉದಾಹರಣೆ—'ಕಂಬವೋ ಮನುಷ್ಯನೋ'. ಮಿಥ್ಯಾಜ್ಞಾನವೇ ವಿಪರ್ಯಯ. ಉದಾಹರಣೆಗೆ—ಶುಕ್ತಿಯಲ್ಲಿ 'ಇದು ರಜತ' ಎಂಬ ಜ್ಞಾನ. ವ್ಯಾಪ್ಯದ ಆರೋಪ-ದಿಂದ ವ್ಯಾಪಕದ ಆರೋಪವನ್ನು ಮಾಡುವುದೇ ತರ್ಕ. ಉದಾಹರಣೆ: 'ಒಂದು ವೇಳೆ ಅಗ್ನಿ ಇಲ್ಲದಿದ್ದಲ್ಲಿ ಧೂಮವೂ ಇರುತ್ತಿರಲಿಲ್ಲ.'

47. ಯಥಾರ್ಥಾ ಮತ್ತು ಅಯಥಾರ್ಥಾ ಎಂದು ಸ್ಮೃತಿಯು ದ್ವಿವಿಧವಾಗಿದೆ. ಪ್ರಮಾಜನ್ಯ-ವಾದುದು ಯಥಾರ್ಥಾ. ಅಪ್ರಮಾಜನ್ಯವಾದುದು ಅಯಥಾರ್ಥಾ.

48. ಎಲ್ಲರಿಗೂ ಅನುಕೂಲಕರವಾದ ಅನುಭವವನ್ನುಂಟುಮಾಡುವ ಭಾವವೇ ಸುಖ. ಎಲ್ಲರಿಗೂ ಪ್ರತಿಕೂಲಕರವಾದ ಅನುಭವವನ್ನುಂಟುಮಾಡುವ ಭಾವವೇ ದುಃಖ. ಕಾಮವೇ ಇಚ್ಛಾ. ಕ್ರೋಧವೇ ದ್ವೇಷ. ಕೃತಿಯು ಪ್ರಯತ್ನ. ವಿಧಿಸಲ್ಪಟ್ಟ ಕರ್ಮದಿಂದ ಉಂಟಾದುದು ಧರ್ಮ. ನಿಷೇಧಿಸಲ್ಪಟ್ಟ ಕರ್ಮದಿಂದುಂಟಾದುದು ಅಧರ್ಮ.

49. ಬುದ್ಧಿ ಮುಂತಾದ ಎಂಟು ಗುಣಗಳು ಆತ್ಮನಲ್ಲಿ ಮಾತ್ರ ಇರುವ ವಿಶೇಷಗುಣಗಳು. ಬುದ್ಧಿ, ಇಚ್ಛಾ, ಪ್ರಯತ್ನಗಳು ನಿತ್ಯ ಮತ್ತು ಅನಿತ್ಯ ಎಂದು ಎರಡು ವಿಧವಾಗಿದೆ. ಈಶ್ವರನಲ್ಲಿರುವವು ನಿತ್ಯವೂ, ಜೀವದಲ್ಲಿರುವವು ಅನಿತ್ಯವೂ ಆಗಿವೆ.

50. ವೇಗ, ಭಾವನಾ ಮತ್ತು ಸ್ಥಿತಿಸ್ಥಾಪಕ ಎಂದು ಸಂಸ್ಕಾರವು ಮೂರು ವಿಧ. ವೇಗವು ಪೃಥಿವ್ಯಾದಿ ನಾಲ್ಕರಲ್ಲಿಯೂ ಮತ್ತು ಮನಸ್ಸಿನಲ್ಲಿಯೂ ಇರುತ್ತದೆ. ಆತ್ಮನಲ್ಲಿ ಮಾತ್ರವಿರುವ ಭಾವನೆಯು ಅನುಭವದಿಂದ ಜನಿಸಿ ಸ್ಮೃತಿಗೆ ಕಾರಣವಾಗುತ್ತದೆ.

ಅಭಿಧಾವ್ಯಾಪಾರಕ್ಕೆ ವಿಷಯವಾದುದು. ಅಭಿಧಾ ಎಂದರೆ ಒಂದು ನಿರ್ದಿಷ್ಟಪದದಿಂದ ಒಂದು ನಿರ್ದಿಷ್ಟ ಅರ್ಥವೇ ಬೋಧಿತವಾಗಬೇಕೆಂಬ ಈಶ್ವರಸಂಕೇತರೂಪವಾದ ಶಕ್ತಿ.

ವಿಶ್ವದ ಸಕಲವಸ್ತುಗಳನ್ನೂ ಏಳು ಸ್ವತಂತ್ರ ವಿಭಾಗಗಳಾಗಿ ವರ್ಗೀಕರಿಸಬಹುದು. ತಾರ್ಕಿಕರು ಪದಾರ್ಥಗಳು ಏಳು ಎಂಬ ನಿರ್ಣಯಕ್ಕೆ ಬರಲು ಕಾರಣವಾದುದನ್ನು ಒಂದು ಹಸುವಿನ ಉದಾಹರಣೆಯ ಮೂಲಕ ಸ್ಪಷ್ಟಗೊಳಿಸಬಹುದು. ಹಸು ಸಮಗ್ರವಾಗಿ ಒಂದು 'ದ್ರವ್ಯ'. ಅದು ಬಿಳಿಯ ಬಣ್ಣದ್ದಾದರೆ ಆ ಬಣ್ಣ 'ಗುಣ'. ಅದು ಚಲಿಸುತ್ತಿದ್ದರೆ ಆ ಚಲನೆಯು 'ಕರ್ಮ'. ವಿಭಿನ್ನ ಹಸುಗಳನ್ನು ಹಸು ಎಂದು ಗುರುತಿಸಲು ಆಧಾರವಾದ ಅಂಶವೇ 'ಸಾಮಾನ್ಯ'. ಹಸುವಿನ ಅವಯವಗಳು ಪರಮಾಣುಗಳಿಂದ ಉಂಟಾಗಿದ್ದು ಆ ಪರಮಾಣುಗಳಲ್ಲಿ 'ವಿಶೇಷ' ಎಂಬ ಪದಾರ್ಥವಿರುತ್ತದೆ. ಹಸು ಎಂಬ ದ್ರವ್ಯಕ್ಕೂ ಅದರ ಗುಣ, ಕ್ರಿಯಾ, ಸಾಮಾನ್ಯ, ವಿಶೇಷಗಳಿಗೂ ಇರುವ ಸಂಬಂಧವೇ 'ಸಮವಾಯ'. 'ಹಸುವು ಕುದುರೆಯಲ್ಲ' ಎಂಬ ವ್ಯವಹಾರದಿಂದ ಪ್ರತೀತವಾಗುವುದೇ 'ಅಭಾವ'. ಪ್ರತಿಯೊಂದು ದ್ರವ್ಯವೂ ಈ ಎಲ್ಲ ಅಂಶಗಳನ್ನು ಹೊಂದಿಯೇ ಇರುತ್ತದೆಂಬ ನಿಶ್ಚಯವಿಲ್ಲ.

ಮೀಮಾಂಸಕರು ಅಂಗೀಕರಿಸುವ ಶಕ್ತಿ ಮತ್ತು ಸಾದೃಶ್ಯಗಳನ್ನು ಪ್ರತ್ಯೇಕಪದಾರ್ಥಗಳೆಂದು ತಾರ್ಕಿಕರು ಅಂಗೀಕರಿಸುವುದಿಲ್ಲ.

3. ತರ್ಕಸಂಗ್ರಹದ ದೀಪಿಕೆಯಲ್ಲಿ ದ್ರವ್ಯದ ಲಕ್ಷಣವನ್ನು द्रव्यत्वजातिमत्त्वं, गुणवत्त्वं वा द्रव्यसामान्यलक्षणम् ಎಂದು ಕೊಡಲಾಗಿದೆ. 'ದ್ರವ್ಯತ್ವವನ್ನು ಹೊಂದಿದ್ದು ದ್ರವ್ಯ' ಎಂಬ ಲಕ್ಷಣ ಸಮರ್ಪಕವಾದುದಾದರೂ ಪ್ರಾಯೋಗಿಕದೃಷ್ಟಿಯಿಂದ ಅದು ನಿರುಪಯುಕ್ತ. ಇನ್ನು क्रियागुणवत् समवायिकारणम् ಎಂಬ ವೈಶೇಷಿಕರ ದ್ರವ್ಯದ ಲಕ್ಷಣವೂ ಆಪಾತತಃ ಸಾಧುವಾಗಿ ತೋರುತ್ತದೆ. ಏಕೆಂದರೆ ದ್ರವ್ಯ ಮಾತ್ರ ಕ್ರಿಯಾ ಮತ್ತು ಗುಣಗಳನ್ನು ಹೊಂದಿದ್ದು ಸಮವಾಯಿಕಾರಣವಾಗಿರುತ್ತದೆ. ಆದರೆ उत्पन्नं द्रव्यं क्षणमगुणमक्रियाकं च तिष्ठति (ದ್ರವ್ಯವು ಉತ್ಪನ್ನವಾದ ಪ್ರಥಮಕ್ಷಣದಲ್ಲಿ ನಿರ್ಗುಣವೂ ನಿಷ್ಕ್ರಿಯವೂ ಆಗಿರುತ್ತದೆ) ಎಂಬ ಅಂಗೀಕೃತ ಅಭಿಪ್ರಾಯದ ಪ್ರಕಾರ ಈ ಲಕ್ಷಣವು ಅನ್ವಯಿಸುವುದಿಲ್ಲ.

ಈ ಸಂದರ್ಭದಲ್ಲಿ ಲಕ್ಷಣದ ಲಕ್ಷಣವನ್ನು ಅರಿತುಕೊಳ್ಳುವುದು ಸೂಕ್ತ. ಅಸಾಧಾರಣ ಧರ್ಮವೇ ಲಕ್ಷಣ. ಅಸಾಧಾರಣ ಧರ್ಮವೆಂದರೆ लक्ष्यतावच्छेदकसमनियतत्वम्। ಎಂದರೆ ಒಂದು ವಸ್ತುವಿನಲ್ಲಿ ಅವಿನಾಭಾವದಿಂದ ಇರುವ ಧರ್ಮ. ಇನ್ನು ಲಕ್ಷಣವು ಸರ್ವಸಮರ್ಪಕವಾಗಬೇಕಾದರೆ ಅದು ಲಕ್ಷ್ಯವೊಂದಕ್ಕೇ ಅನ್ವಯಿಸಬೇಕು. ಆ ಲಕ್ಷಣದಲ್ಲಿ ಅವ್ಯಾಪ್ತಿ, ಅತಿವ್ಯಾಪ್ತಿ ಮತ್ತು ಅಸಂಭವಗಳೆಂಬ ದೋಷಗಳು ಇರಬಾರದು.

ಅವ್ಯಾಪ್ತಿ: लक्ष्यैकदेशावृत्तित्वमव्याप्तिः। ಲಕ್ಷಿಸಲ್ಪಡುವ ಪದಾರ್ಥದ ಒಂದು ಕಡೆ ಉಕ್ತಲಕ್ಷಣ ಅನ್ವಯಿಸದಿರುವಿಕೆ. ಕಪಿಲತ್ವ ಎಂಬುದು ಗೋವಿನ ಲಕ್ಷಣವೆಂದರೆ ಆ ಲಕ್ಷಣವು ಇತರ ವರ್ಣಗಳ ಗೋವುಗಳಿಗೆ ಅನ್ವಯಿಸುವುದಿಲ್ಲ.

ಅತಿವ್ಯಾಪ್ತಿ: अलक्ष्ये लक्षणस्य वर्तनमतिव्याप्तिः। ಒಂದು ಲಕ್ಷಣ ಆ ವಸ್ತುವನ್ನು ಲಕ್ಷಿಸುವುದರ

ಜೊತೆ ಅದಕ್ಕೆ ಸಂಬಂಧಿಸದ ಅನ್ಯವಸ್ತುವನ್ನು ಒಳಗೊಳ್ಳುವಿಕೆಯೇ ಅತಿವ್ಯಾಪ್ತಿ. 'ಶೃಂಗವನ್ನು ಹೊಂದಿರುವುದು ಹಸು' ಎಂದಾಗ ಶೃಂಗಿತ್ವ ಎಂಬ ಲಕ್ಷಣ ಹಸುವಲ್ಲದ ಆದರೆ ಶೃಂಗವನ್ನು ಹೊಂದಿರುವ ಸಾರಂಗ, ಟಗರು ಇತ್ಯಾದಿಗಳಿಗೂ ಅನ್ವಯಿಸುತ್ತದೆ.

ಅಸಂಭವ: लक्ष्यमात्रावृत्तित्वमसम्भवः। ಲಕ್ಷಣವು ತಾನು ಲಕ್ಷಿಸಬೇಕಾದ ವಸ್ತುಗಳಲ್ಲಿಯೇ ಇಲ್ಲದಿದ್ದರೆ ಅದು ಅಸಂಭವ. 'ಒಂದು ಗೊರಸನ್ನು ಹೊಂದಿದ್ದು ಹಸು' ಎಂದಾಗ ಯಾವ ಹಸುವಿನಲ್ಲಿಯೂ ಒಂದೇ ಗೊರಸು ಇಲ್ಲದಿರುವುದರಿಂದ ಈ ಲಕ್ಷಣ ಗೋ-ಸಾಮಾನ್ಯಕ್ಕೆ ಅನ್ವಯಿಸುವುದಿಲ್ಲ.

ಹೀಗೆ अव्याप्त्यतिव्याप्त्यसम्भवदोषत्रयशून्यत्वं लक्षणस्य लक्षणम्। ಎಂದು ಸಿದ್ಧವಾಗುತ್ತದೆ. ಆದರೆ ಲಕ್ಷಣವು ಕೇವಲ ಶಾಬ್ದಿಕವಾಗಿರದೇ ಲಕ್ಷ್ಯದ ಸ್ವರೂಪವಿವರಣೆಯನ್ನೂ ಒಳಗೊಂಡಿರ ಬೇಕಾಗುತ್ತದೆ.

ದ್ರವ್ಯದ ಸ್ವರೂಪವೇ ಅದನ್ನು ಲಕ್ಷಿಸುವಲ್ಲಿ ತೊಡಕಾಗಿದೆ. ಅದು ಗುಣಸಹಿತವಾದುದಾದರೂ ಗುಣವಿಭಿನ್ನವೂ ಆದುದು. ಸಮವಾಯಸಂಬಂಧದಿಂದ ಗುಣಗಳೊಡನೆ ಕೂಡಿರುವುದೇ ದ್ರವ್ಯದ ಲಕ್ಷಣವೆಂದಲ್ಲಿ ದ್ರವ್ಯಗುಣಗಳಿಗೆ ಪ್ರತ್ಯೇಕತೆಯೇ ಉಳಿಯುವುದಿಲ್ಲ, ಗುಣಗಳು ದ್ರವ್ಯದೊಡನೆ ಹಾಗೆ ಕೂಡಿರದಿದ್ದರೆ ದ್ರವ್ಯಲಕ್ಷಣವೇ ಸಾಧ್ಯವಾಗುವುದಿಲ್ಲ. ಇಂತಹ ಸಂದಿಗ್ಧತೆಯಿರುವುದರಿಂದಲೇ ಅನೇಕ ದಾರ್ಶನಿಕರು ವಿಶೇಷವಾಗಿ ಬೌದ್ಧರು ದ್ರವ್ಯದ ಅಸ್ತಿತ್ವವನ್ನೇ ನಿರಾಕರಿಸುತ್ತಾರೆ. ಆದರೆ ಗುಣಗಳಿಗೆ ಆಶ್ರಯವಿರಲೇಬೇಕಾದ್ದರಿಂದ ದ್ರವ್ಯದ ಅಸ್ತಿತ್ವವನ್ನು ನಿರಾಕರಿಸುವಂತೆಯೂ ಇಲ್ಲ. ಆದ್ದರಿಂದಲೇ ವೇದಾಂತಿಗಳು ದ್ರವ್ಯಗಳನ್ನು ಅನಿರ್ವಚನೀಯವೆಂದೂ ಮಾಯಾ ಎಂದೂ ನಿರೂಪಿಸುತ್ತಾರೆ.

ಅಂತತಃ ತಾರ್ಕಿಕರಿಂದ ಅಂಗೀಕೃತವಾದ ದ್ರವ್ಯಲಕ್ಷಣ ಹೀಗಿದೆ: गुणसमानाधिकरणसत्ता - भिन्नजातिमत्। ದ್ರವ್ಯವು ಉತ್ಪನ್ನವಾದ ಪ್ರಥಮಕ್ಷಣದಲ್ಲಿ ಗುಣರಹಿತವಾದರೂ ಗುಣಗಳ ಸಹಯೋಗವನ್ನು ಹೊಂದಿದ ದ್ರವ್ಯತ್ವ ಎಂಬ ಜಾತಿಯನ್ನು ಹೊಂದಿರುತ್ತದೆ. ಕೊನೆಗೂ ಆರಂಭದಲ್ಲಿ ನಿರೂಪಿತವಾದ द्रव्यत्वजातिमत्त्वम् ಎಂಬ ಶಾಬ್ದಿಕಲಕ್ಷಣಕ್ಕೇ ತಲುಪುತ್ತೇವೆ.

'ನವೈವ' ಎಂಬಲ್ಲಿಯ 'ಏವ'ಕಾರವು ದ್ರವ್ಯಗಳು ಒಂಬತ್ತೇ ಎಂದು ಖಚಿತಪಡಿಸುತ್ತದೆ. ಮೀಮಾಂಸಕರ 'ತಮಸ್' ಎಂಬ ದಶಮದ್ರವ್ಯವನ್ನು ತಾರ್ಕಿಕರು ನಿರಾಕರಿಸುತ್ತಾರೆ. ಮೀಮಾಂಸಕರ ವಾದ ಹೀಗಿದೆ: शुक्लः गौः चलति ಎಂಬಲ್ಲಿ ಗೋವನ್ನು ದ್ರವ್ಯವೆಂದು ಪರಿಗಣಿಸುವಂತೆ ನೀಲರೂಪಗುಣಕ್ಕೂ ಚಲನರೂಪಕ್ರಿಯೆಗೂ ಆಶ್ರಯವಾದ ತಮಸ್ಸನ್ನು ಒಂದು ಸ್ವತಂತ್ರದ್ರವ್ಯವನ್ನಾಗಿ ಸ್ವೀಕರಿಸಬೇಕು. 'ತಮಸ್' ನೀಲರೂಪವಿರುವುದರಿಂದ ಆಕಾಶ-ಕಾಲ-ದಿಕ್-ಆತ್ಮ-ಮನಸ್ಸುಗಳಿಂದ ಬೇರೆಯಾಗಿದೆ. ಅದು ಸ್ಪರ್ಶರಹಿತವಾದುದರಿಂದ ವಾಯುವಲ್ಲ, ಉಷ್ಣಸ್ಪರ್ಶವಿಲ್ಲದುದರಿಂದ ತೇಜಸ್ ಅಲ್ಲ, ಶೀತಸ್ಪರ್ಶರಹಿತವಾದುದರಿಂದ ಜಲವಲ್ಲ, ಗಂಧಾಭಾವದಿಂದ ಪೃಥಿವಿಯೂ ಅಲ್ಲ. ಆದ್ದರಿಂದ ತಮಸ್ಸನ್ನು ದಶಮದ್ರವ್ಯವಾಗಿ ಅಂಗೀಕರಿಸಬೇಕು.

ತಾರ್ಕಿಕರು ಈ ವಾದವನ್ನು ಹೀಗೆ ತಿರಸ್ಕರಿಸುತ್ತಾರೆ: ರೂಪಸಹಿತದ್ರವ್ಯಜ್ಞಾನಕ್ಕೆ ತೇಜಸ್ಸಿನ ಆವಶ್ಯಕತೆ ಇದೆ. ತಮಸ್ ನೀಲರೂಪಸಹಿತವಾಗಿದೆ ಎಂದು ವಾದಿಸಿದರೂ ಅದನ್ನು ತೇಜಸ್ಸಿನ ಮೂಲಕ ನೋಡಲಾಗುವುದಿಲ್ಲ. ಆದ್ದರಿಂದ ತೇಜಸ್ಸಿನ ಅಭಾವವೇ ತಮಸ್ ಎಂದು

ಪರಿಗಣಿಸಬೇಕು. 'ತಮಸ್ಸೇ ದ್ರವ್ಯವಾಗಲಿ, ತೇಜಸ್ಸನ್ನು ಅದರ ಅಭಾವವೆಂದು ಪರಿಗಣಿಸಬೇಕು' ಎಂಬ ವಾದವೂ ನಿಲ್ಲುವುದಿಲ್ಲ. ಏಕೆಂದರೆ ತೇಜಸ್ಸು ಅಭಾವರೂಪಿಪದಾರ್ಥವಾದರೆ ಉಷ್ಣಸ್ಪರ್ಶವೆಂಬ ಗುಣಕ್ಕೆ ಆಶ್ರಯವಾಗಿ ಮತ್ತೊಂದು ದ್ರವ್ಯವನ್ನು ಕಲ್ಪಿಸಬೇಕಾಗುತ್ತದೆ. ತಮಸ್ಸಿನಲ್ಲಿಯ ನೀಲಗುಣ ಆಕಾಶದಲ್ಲಿಯ ನೀಲದಂತೆ ಕೇವಲ ಭ್ರಾಂತಿ. ದೀಪದ ಚಲನಕ್ರಿಯೆ ಅಲ್ಲಿ ಆರೋಪಿತವಾಗಿದೆ. ಆದ್ದರಿಂದ ದ್ರವ್ಯಗಳು ಒಂಬತ್ತು ಮಾತ್ರ.

4. ವ್ಯವಹಾರಯೋಗ್ಯತೆಯನ್ನು ಪಡೆದ ವ್ಯಕ್ತಿ ತನ್ನ ವಿಶಿಷ್ಟತೆಯನ್ನು ಯಾವುದರ ಮೂಲಕ ಸ್ಥಾಪಿಸುವುದೋ ಅದು ಗುಣ. ಶುಕ್ಲಾದಿಗುಣಗಳು ಸಂಕೇತಿತವಾದ ವ್ಯಕ್ತಿಯನ್ನು ಇತರ ವ್ಯಕ್ತಿಗಳಿಂದ ಬೇರ್ಪಡಿಸುತ್ತವೆ. ಆದ್ದರಿಂದಲೇ ಗುಣವನ್ನು विशेषाधानहेतुः ಎಂದು ಕಾವ್ಯಪ್ರಕಾಶದಲ್ಲಿ ನಿರೂಪಿಸಲಾಗಿದೆ.

ವೈಶೇಷಿಕಸೂತ್ರಗಳಲ್ಲಿ ಗುಣಲಕ್ಷಣವನ್ನು द्रव्याश्रयी अगुणवान् ಎಂದು ಕೊಡಲಾಗಿದೆ. ಗುಣಗಳಿಗೆ ಆಶ್ರಯವಾದುದು ದ್ರವ್ಯ. ಆದ್ದರಿಂದ ದ್ರವ್ಯಗಳನ್ನು ತನ್ನ ಆಶ್ರಯವನ್ನಾಗಿ ಹೊಂದಿದ್ದು ಗುಣರಹಿತವಾದುದೇ ಗುಣ. ಗುಣಗಳಿಗೆ ಮತ್ತೆ ಗುಣ ಇದೆಯೆಂದರೆ ಅನವಸ್ಥೆಯೆಂಬ ದೋಷ ಬರುತ್ತದೆ. ಆದರೆ ಕರ್ಮವು ದ್ರವ್ಯಾಶ್ರಯಿಯಾಗಿ ಗುಣರಹಿತವಾಗಿರುವುದರಿಂದ ಮೇಲಿನ ವ್ಯಾಖ್ಯೆ ಮುಂದುವರಿದು संयोगविभागेषु अकारणमनपेक्ष इति गुणलक्षणम् ಎಂದಿದೆ. ಸಂಯೋಗ-ವಿಭಾಗಗಳಿಗೆ ಕಾರಣವಾದ ಕರ್ಮವನ್ನು ಇಲ್ಲಿ ವ್ಯಾವರ್ತನಗೊಳಿಸಲಾಗಿದೆ.

ದೀಪಿಕೆಯಲ್ಲಿ गुणत्वजातिमान् ಅಥವಾ द्रव्यकर्मभिन्नत्वे सति सामान्यवान् ಎಂದು ದ್ವಿವಿಧವಾಗಿ ಗುಣವನ್ನು ಲಕ್ಷಿಸಲಾಗಿದೆ. ಇವೆರಡರಲ್ಲಿ ಮೊದಲ ಲಕ್ಷಣವು ಕೇವಲ ಶಾಬ್ದಿಕವಾದುದು. ಸಾಮಾನ್ಯವೆಂಬ ಪದಾರ್ಥ ದ್ರವ್ಯ, ಗುಣ ಮತ್ತು ಕರ್ಮಗಳಲ್ಲಿ ಮಾತ್ರ ಇರುವುದರಿಂದ ದ್ರವ್ಯ ಮತ್ತು ಕರ್ಮಗಳನ್ನು ಬೇರ್ಪಡಿಸಿ ಗುಣಕ್ಕೆ ಮಾತ್ರ ಅನ್ವಯಿಸುವಂತೆ ದೀಪಿಕೆಯ ದ್ವಿತೀಯ ಲಕ್ಷಣವಿದೆ.

5. ವೈಶೇಷಿಕಸೂತ್ರಗಳಲ್ಲಿ ಕರ್ಮಲಕ್ಷಣವನ್ನು एकद्रव्यम् अगुणं संयोगविभागेषु अनपेक्षकारणम् ಎಂದು ಕೊಡಲಾಗಿದೆ. ಸಂಯೋಗವಿಭಾಗಗಳಿಗೆ ಅಸಮವಾಯಿಕಾರಣವಾಗಿ ಗುಣರಹಿತತೆಯಿಂದ ದ್ರವ್ಯವನ್ನು ಆಶ್ರಯಿಸಿರುವುದೇ ಕರ್ಮ.

ದೀಪಿಕೆಯಲ್ಲಿ कर्मत्वजातिमत् ಎಂಬ ಶಾಬ್ದಿಕಲಕ್ಷಣದ (verbal definition) ಜೊತೆ संयोगभिन्नत्वे सति संयोगासमवायिकारणम् ಎಂಬ ಲಕ್ಷಣವನ್ನು ಕೊಡಲಾಗಿದೆ. ಸಂಯೋಗಕ್ಕೆ ಅಸಮವಾಯಿಕಾರಣವಾಗಿದ್ದು ಸ್ವತಃ ಯಾವುದು ಸಂಯೋಗವೇ ಅಲ್ಲವೋ ಅದು ಕರ್ಮ. ಹಸ್ತ-ಪುಸ್ತಕಸಂಯೋಗದಲ್ಲಿ ಹಸ್ತದ ಚಲನೆ ಇಂತಹ ಅಸಮವಾಯಿಕಾರಣವಾಗಿದೆ. ಕೆಲವು ಸಂದರ್ಭಗಳಲ್ಲಿ ಒಂದು ಸಂಯೋಗ ಇನ್ನೊಂದು ಸಂಯೋಗದ ಅಸಮವಾಯಿಕಾರಣವಾಗುತ್ತದೆ. ಹಸ್ತ-ಪುಸ್ತಕಸಂಯೋಗವು ದೇಹ-ಪುಸ್ತಕಸಂಯೋಗಕ್ಕೆ ಅಸಮವಾಯಿಕಾರಣವಾಗಿದೆ. ಇದನ್ನು ತಪ್ಪಿಸುವ ಸಲುವಾಗಿಯೇ ಕರ್ಮಲಕ್ಷಣದಲ್ಲಿ संयोगभिन्नत्वे सति ಎಂಬ ಪದವನ್ನು ಸೇರಿಸಲಾಗಿದೆ.

ಕರ್ಮದ ಐದು ವಿಧ ವಿಂಗಡಣೆ ಆಪಾತತಃ ಯಾದೃಚ್ಛಿಕ ಎಂದು ತೋರಿದರೂ ಆ ವಿಂಗಡಣೆಗೆ

ಒಂದು ನಿರ್ದಿಷ್ಟ ತಾತ್ತ್ವಿಕಹಿನ್ನೆಲೆಯಿರುವುದನ್ನು ಗುರುತಿಸಬಹುದು. ಕರ್ಮವು ಮೂಲತಃ ಲಂಬ (verticle), ಸಮಾನಾಂತರ (horizontal) ಮತ್ತು ತಿರ್ಯಕ್ (slanting) ಎಂದು ಮೂರು ವಿಧ. ಲಂಬಚಲನೆಯು ಅಧೋದೇಶದಿಂದ ಊರ್ಧ್ವಗಾಮಿ (ಉತ್ಕ್ಷೇಪಣ) ಮತ್ತು ಊರ್ಧ್ವ ದೇಶದಿಂದ ಅಧೋಗಾಮಿ (ಅಪಕ್ಷೇಪಣ) ಎಂದು ದ್ವಿವಿಧ. ಸಮಾನಾಂತರಚಲನೆಯು ವಕ್ರತ್ವಸಂಪಾದಕ (ಆಕುಂಚನ) ಮತ್ತು ಋಜುತ್ವಸಂಪಾದಕ (ಪ್ರಸಾರಣ) ಎಂದು ಎರಡು ವಿಧ. ಉಳಿದ ಚಲನೆಗಳೆಲ್ಲವೂ ತಿರ್ಯಕ್ (ಗಮನ) ಎಂಬುದರಲ್ಲಿ ಅಂತರ್ಭಾವವಾಗುತ್ತವೆ.

ಕರ್ಮವು ಸದಾ ಅನಿತ್ಯವಾದುದು. ಆದ್ದರಿಂದ ಅದನ್ನು ಸಾಧ್ಯವಸ್ತುಧರ್ಮ ಎನ್ನಲಾಗುತ್ತದೆ.

6. ಸಮಾನವರ್ಗಕ್ಕೆ ಸಂಬಂಧಿಸಿದ ಸಕಲವ್ಯಕ್ತಿಗಳಿಗೂ ಸಮಾನವಾದ ಒಂದು ಅಂಶವಿರುತ್ತದೆ. ಅದೇ ಸಾಮಾನ್ಯ. ಜಗತ್ತಿನಲ್ಲಿರುವ ಎಲ್ಲ ಗೋವುಗಳೂ ಆಕಾರ, ರೂಪಭೇದದಿಂದ ವಿಭಿನ್ನವಾಗಿ ತೋರಿದರೂ ಅವೆಲ್ಲವೂ 'ಗೋತ್ವ' ಎಂಬ ಸಮಾನಧರ್ಮದಿಂದ ಕೂಡಿರುತ್ತವೆ. ಗ್ರಂಥದಲ್ಲಿ ಸಾಮಾನ್ಯದ ಲಕ್ಷಣವನ್ನು नित्यमेकमनेकानुगतम् ಎಂದಿದೆ. ನಿತ್ಯವಾಗಿದ್ದು ಅನೇಕ ವ್ಯಕ್ತಿಗಳಲ್ಲಿ ಒಂದೇ ರೀತಿಯಾಗಿರುವುದು ಸಾಮಾನ್ಯ. ಸಂಯೋಗವೂ, ಏಕತ್ವದ್ವಿತ್ವಾದಿಸಂಖ್ಯೆಗಳೂ ಅನೇಕ ವ್ಯಕ್ತಿಗಳಲ್ಲಿದ್ದರೂ ಅವು ನಿತ್ಯವಲ್ಲ. ಆದ್ದರಿಂದ 'ನಿತ್ಯ' ಎಂಬ ಪದ ಅವುಗಳಿಂದ ಸಾಮಾನ್ಯ ಎಂಬ ಪದವನ್ನು ಬೇರ್ಪಡಿಸುತ್ತದೆ. ಪರಮಾಣುಗತರೂಪವು ನಿತ್ಯವೂ ಅನೇಕವುಗಳಲ್ಲಿ ಇರುವವು-ಗಳಾದರೂ ಎಲ್ಲವುಗಳಲ್ಲಿ ಏಕವಿಧವಾಗಿರುವುದಿಲ್ಲ. ಆದ್ದರಿಂದ ಪರಮಾಣುಗತರೂಪದಿಂದ ಸಾಮಾನ್ಯವನ್ನು ಪ್ರತ್ಯೇಕಿಸಲು 'ಅನೇಕಾನುಗತಮ್' ಎಂಬ ಪದವಿದೆ. ಅತ್ಯಂತಾಭಾವವು ನಿತ್ಯವೂ ಅನೇಕಾನುಗತವೂ ಆಗಿದ್ದರೂ ಅನುಗತ ಎಂಬ ಪದದ ಅರ್ಥ ಇಲ್ಲಿ समवायसम्बन्धेन वर्तमानम् ಎಂದಿರುವುದರಿಂದ ಅತ್ಯಂತಾಭಾವದಲ್ಲಿ ಅತಿವ್ಯಾಪ್ತಿ ಬರುವುದಿಲ್ಲ.

ವೈಶೇಷಿಕಸೂತ್ರದ ಪ್ರಕಾರ ಸಾಮಾನ್ಯ ಎಂಬುದು ಅದನ್ನು ಲಕ್ಷಿಸುವ ದೃಷ್ಟಿಯನ್ನು ಅವಲಂಬಿಸಿದೆ. सामान्यं विशेष इति बुद्ध्यपेक्षम्। ಒಂದು ಅಂಶ ಅನೇಕ ವ್ಯಕ್ತಿಗಳಲ್ಲಿದ್ದು ಅವೆಲ್ಲ ವ್ಯಕ್ತಿಗಳನ್ನು ಒಂದೇ ವರ್ಗದಡಿಯಲ್ಲಿ ವರ್ಗೀಕರಿಸುವುದಕ್ಕಾಗಿ ಆ ಅಂಶವನ್ನು ಪ್ರಯೋಗಿಸಿದರೆ ಅದು ಸಾಮಾನ್ಯವೆನಿಸುತ್ತದೆ. ಗೋತ್ವ ಎಂಬ ಅಂಶ ಅನೇಕ ಗೋವ್ಯಕ್ತಿಗಳಲ್ಲಿದ್ದು ಆ ಎಲ್ಲ ಗೋವುಗಳನ್ನು 'ಗೋ' ಎಂಬ ಒಂದೇ ವರ್ಗದಡಿಯಲ್ಲಿ ವರ್ಗೀಕರಿಸಲು ಪ್ರಯೋಗಿಸಿದಾಗ ಗೋತ್ವವು ಸಾಮಾನ್ಯ ಎನಿಸುತ್ತದೆ. ಆದರೆ ಗೋಭಿನ್ನವಾದ ವರ್ಗಗಳಿಂದ ಗೋವ್ಯಕ್ತಿಯನ್ನು ಪ್ರತ್ಯೇಕಿಸಲು ಗೋತ್ವವನ್ನು ಉಪಯೋಗಿಸಿದರೆ ಗೋತ್ವವು ಗೋವ್ಯಕ್ತಿಯ ವಿಶೇಷವಾಗುತ್ತದೆ.

7. ಅವಯವಸಹಿತವಾದ ಸ್ಥೂಲವಸ್ತುಗಳನ್ನು ಅವುಗಳ ರೂಪ ಮತ್ತು ಆಕಾರಗಳ ಆಧಾರದಿಂದ ಪ್ರತ್ಯೇಕಿಸಬಹುದು. ಆದರೆ ರೂಪ ಮತ್ತು ಆಕಾರಗಳು ಅವುಗಳ ವ್ಯತ್ಯಾಸವನ್ನು ಆ ವಸ್ತುಗಳ ಮೂಲದಲ್ಲಿ ಪ್ರತ್ಯೇಕಿಸಲು ಸಮರ್ಥವಾಗಲಾರವು. ಏಕೆಂದರೆ ವಸ್ತುಗಳ ಮೂಲವೆಂದರೆ ಪರಮಾಣುಗಳು. ಅವು ನಿರವಯವಿಗಳಾಗಿರುವುದರಿಂದ ರೂಪ ಮತ್ತು ಆಕಾರರಹಿತವಾಗಿರುತ್ತವೆ. ಇವುಗಳಲ್ಲಿ ಪರಸ್ಪರಭೇದಕಾರಕವಾದ ಅಂಶಗಳನ್ನು ಅಂಗೀಕರಿಸದಿದ್ದರೆ ಸ್ಥೂಲವಸ್ತುಗಳಲ್ಲಿ

ವ್ಯತ್ಯಾಸವೇ ಉಳಿಯಲಾರದು. ಉದಾಹರಣೆಗೆ, ಘಟದ ಪರಮಾಣುಗಳು ಪಟದ ಪರಮಾಣುಗಳಿಗಿಂತ ಭಿನ್ನವಾದ ಧರ್ಮಗಳನ್ನು ಹೊಂದಿವೆ ಎಂದು ಅಂಗೀಕರಿಸದಿದ್ದರೆ ಘಟಪಟಗಳಲ್ಲಿ ಭೇದವೇ ಉಳಿಯಲಾರದು. ಹೀಗೆ ಸಾವಯವಿವಸ್ತುಗಳ ಸ್ವರೂಪವ್ಯತ್ಯಾಸಕ್ಕೆ ಆಯಾ ವಸ್ತುಗಳ ಪರಮಾಣುವಿಶೇಷವೇ ಕಾರಣವಾಗಿರುತ್ತದೆ. ಒಂದು ಪರಮಾಣುವಿನಲ್ಲಿರುವ ವಿಶೇಷವು ಆ ಪರಮಾಣುವನ್ನು ಇತರಪರಮಾಣುಗಳಿಂದ ಪ್ರತ್ಯೇಕಿಸುತ್ತದೆ. ಆದ್ದರಿಂದ ವಿಶೇಷವನ್ನು ಸ್ವತೋವ್ಯಾವರ್ತಕ ಎಂದು ವ್ಯಾಖ್ಯಾನಿಸುತ್ತಾರೆ. ಒಂದು ಪರಮಾಣುವಿನಲ್ಲಿರುವ ವಿಶೇಷವು ಆ ಪರಮಾಣುವನ್ನು ಇತರಪರಮಾಣುಗಳಿಂದ ಪ್ರತ್ಯೇಕಿಸಲು ಸಮರ್ಥವಾಗದಿದ್ದರೆ ವಿಶೇಷಕ್ಕೆ ಇನ್ನೊಂದು ವಿಶೇಷವನ್ನು ಕಲ್ಪಿಸಬೇಕಾಗಿ ಅನವಸ್ಥಾ ಎಂಬ ದೋಷ ಬರುತ್ತದೆ.

ಪ್ರಪಂಚದ ಸ್ಥೂಲವಸ್ತುಗಳಲ್ಲಿ ಭೇದಸಾಧನೆಗಾಗಿ ಮಾತ್ರವಲ್ಲದೇ ಮುಖ್ಯವಾಗಿ ನಿತ್ಯದ್ರವ್ಯಗಳ ಪರಸ್ಪರಭೇದಸಾಧನೆಗಾಗಿ ವಿಶೇಷ ಎಂಬ ಪದಾರ್ಥವನ್ನು ಅಂಗೀಕರಿಸಲಾಗಿದೆ. ಪೃಥಿವೀ, ಅಪ್, ತೇಜಸ್, ವಾಯು ಇವುಗಳ ಪರಮಾಣುಗಳು, ಆಕಾಶ, ಕಾಲ, ದಿಕ್, ಆತ್ಮಾ ಮತ್ತು ಮನಸ್ ಇವು ನಿತ್ಯದ್ರವ್ಯಗಳು. ಇವುಗಳಲ್ಲಿ ವಿಶೇಷವು ಸಮವಾಯಸಂಬಂಧದಿಂದ ಇರುತ್ತದೆ. ಪ್ರತ್ಯೇಕಿಸಬೇಕಾದ ವಿಷಯಗಳು ಅನಂತವಾಗಿರುವುದರಿಂದ ಪ್ರತ್ಯೇಕಿಸುವ ವಿಶೇಷಗಳು ಅನಂತವಾಗಿರುತ್ತವೆ.

8. ವಸ್ತುದ್ವಯಗಳ ನಡುವೆ ಅವಿಭಾಜ್ಯವಾಗಿರುವ ಸಂಬಂಧವೇ ಸಮವಾಯ. ಸಂಯೋಗ ಸಂಬಂಧಕ್ಕಿಂತ ಭಿನ್ನವಾದ ಸಂಬಂಧದ ಸ್ಥಾಪನೆಗಾಗಿ ಸಮವಾಯ ಎಂಬ ಪದಾರ್ಥವನ್ನು ಅಂಗೀಕರಿಸಲಾಗಿದೆ. ಸಂಯೋಗಸಂಬಂಧದಲ್ಲಿ ಸಂಯೋಗ ನಾಶವಾದರೂ ಸಂಯುಕ್ತವಾದ ವಸ್ತುದ್ವಯವು ಪೂರ್ವಸ್ಥಿತಿಯಲ್ಲಿಯೇ ಇರುತ್ತದೆ. ಆದರೆ ಸಮವಾಯಸಂಬಂಧ ನಾಶವಾಗ-ಬೇಕಾದರೆ ಸಮವಾಯದಿಂದ ಸಂಬಂಧಿಸಿದ ವಸ್ತುದ್ವಯದ ಒಂದು ವಸ್ತುವು ನಾಶವಾಗ-ಬೇಕಾಗುತ್ತದೆ. ತಾರ್ಕಿಕರು ಸಮವಾಯವನ್ನು ನಿತ್ಯಸಂಬಂಧವೆಂದು ಅಂಗೀಕರಿಸುತ್ತಾರೆ. ಆದರೆ ಇಲ್ಲಿಯ ನಿತ್ಯತ್ವವು ಪರಮಾಣುವಿನ ನಿತ್ಯತ್ವದಂತೆ ನಿರಪೇಕ್ಷವಾಗಿರದೆ ಸಾಪೇಕ್ಷವಾಗಿರುತ್ತದೆ. ಅಂದರೆ ಭಾವಕಾರ್ಯವೊಂದನ್ನು ಉತ್ಪಾದಿಸದೇ ಅಥವಾ ನಾಶಮಾಡದೇ ಸಮವಾಯವನ್ನು ಉತ್ಪಾದಿಸಲಾಗಲಿ ಅಥವಾ ನಾಶಮಾಡಲಾಗಲಿ ಸಾಧ್ಯವಿಲ್ಲ. ಈ ಅರ್ಥದಲ್ಲಿ ಸಮವಾಯವು ನಿತ್ಯವಾಗಿದೆ.

ಸಂಯೋಗ ಎಂಬ ಅನಿತ್ಯಸಂಬಂಧದಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ ಲಕ್ಷಣದಲ್ಲಿ 'ನಿತ್ಯ' ಎಂಬ ಪದಪ್ರಯೋಗವಿದೆ. ಆದರೆ ಆಕಾಶ ಮುಂತಾದವೂ ನಿತ್ಯವಾದ್ದರಿಂದ ಅವುಗಳಲ್ಲಿ ಅತಿವ್ಯಾಪ್ತಿ ನಿವಾರಣೆಗೆ 'ಸಂಬಂಧ' ಎಂಬ ಪದವಿದೆ.

ಸಾಂಖ್ಯರು ಮತ್ತು ವೇದಾಂತಿಗಳು ಸಮವಾಯವನ್ನು ಒಂದು ಪ್ರತ್ಯೇಕಪದಾರ್ಥವೆಂದು ಅಂಗೀಕರಿಸುವುದಿಲ್ಲ. ತಾರ್ಕಿಕರು ನಿರೂಪಿಸುವ ಸಮವಾಯವು ಸ್ವರೂಪಸಂಬಂಧ ಅಥವಾ ತಾದಾತ್ಮ್ಯಸಂಬಂಧವಲ್ಲದೇ ಬೇರೇನೂ ಅಲ್ಲ; ವಸ್ತುದ್ವಯವು ಸಮವಾಯದ ಸಹಾಯವಿಲ್ಲದೆ ತಾದಾತ್ಮ್ಯಸಂಬಂಧದಿಂದ ಕೂಡಿರುವಾಗ ಮತ್ತೆ ಸಮವಾಯವೆಂಬ ಹೊಸ ಸಂಬಂಧ ಏಕೆ? ಘಟ ಮತ್ತು ಘಟತ್ವದಲ್ಲಿ ತಾದಾತ್ಮ್ಯಸಂಬಂಧವಿದೆಯೆಂದರೆ ಸಾಲುವುದಿಲ್ಲವೇ? ಎಂಬುದು ಅವರ ವಾದ.

ಅವರ ಪ್ರಕಾರ ನಿತ್ಯಸಂಬಂಧ ಎಂಬುದೇ ಮಿಥ್ಯೆ. ಏಕೆಂದರೆ ಕಾರಣ ಮತ್ತು ಕಾರ್ಯಗಳು ವಿಭಿನ್ನವಸ್ತುಗಳೇ ಅಲ್ಲ.

ಆದರೆ ಈ ವಾದವು ಆಪಾತರಮಣೀಯ. ಲೋಕದಲ್ಲಿ ಕಾರಣದಿಂದಲೇ ಕಾರ್ಯದ ಉತ್ಪತ್ತಿಯಾಗುವುದು ಅನುಭವಸಿದ್ಧವಾದರೂ ಕಾರಣವನ್ನೇ ಕಾರ್ಯವೆಂದು ಕರೆಯುವ ವ್ಯವಹಾರವಿಲ್ಲ. ಪಟವೆಂಬ ಕಾರ್ಯವು ತಂತು ಎಂಬ ಕಾರಣದಿಂದ ಉಂಟಾದರೂ ಪಟವನ್ನು ಯಾರೂ ತಂತು ಎಂದು ವ್ಯವಹರಿಸುವುದಿಲ್ಲ. ಇನ್ನು ಪೂರ್ವಪಕ್ಷದವರು ವಾದಿಸುವಂತೆ ತಂತು ಮತ್ತು ಪಟಗಳ ನಡುವೆ ತಾದಾತ್ಮ್ಯಸಂಬಂಧವಿಲ್ಲ. ಏಕೆಂದರೆ ಪಟವು ಪಟದಲ್ಲಿ ತಾದಾತ್ಮ್ಯಸಂಬಂಧದಿಂದ ಇರುವುದೇ ವಿನಾ ತಂತುವಿನಲ್ಲಿ ಅಲ್ಲ. ತಂತು ಮತ್ತು ಪಟಗಳು ಅವಿಭಾಜ್ಯವಾಗಿರುವುದರಿಂದ ಬೇರ್ಪಡಿಸಲು ಸಾಧ್ಯವಾಗುವ ಸಂಯೋಗಸಂಬಂಧವೂ ಇಲ್ಲಿ ಇಲ್ಲ. ಹೀಗೆ ತಂತು ಮತ್ತು ಪಟಗಳ ನಡುವೆ ತಾದಾತ್ಮ್ಯ ಅಥವಾ ಸಂಯೋಗಸಂಬಂಧಕ್ಕಿಂತ ಭಿನ್ನವಾದ ಅವಿಭಾಜ್ಯಸಂಬಂಧವಿರುವುದು ಲೋಕಪ್ರಸಿದ್ಧವಾಗಿದೆ. ಈ ಸಂಬಂಧವೇ ಸಮವಾಯ.

9. ಅಭಾವವನ್ನು भावभिन्न: पदार्थ: ಎಂದು ಪರಿಗಣಿಸುತ್ತಾರೆ. ಇದು ಅಭಾವಗೊಂಡ ವಸ್ತುವಿನ (ಪ್ರತಿಯೋಗಿಯ) ಜ್ಞಾನವನ್ನು ಆಶ್ರಯಿಸಿರುತ್ತದೆ. प्रतियोगिज्ञानाधीनज्ञानविषयत्वम् ಎಂದೂ ಅಭಾವವನ್ನು ವಿವರಿಸುತ್ತಾರೆ. ಘಟಾಭಾವಕ್ಕೆ ಪ್ರತಿಯೋಗಿಯಾದ ಘಟದ ಜ್ಞಾನವಿದ್ದಾಗ ಮಾತ್ರ ಘಟದ ಅಭಾವವನ್ನು ಅರಿಯಲು ಸಾಧ್ಯ. ಅಭಾವಕ್ಕೆ ಯಾವುದೇ ವಾಸ್ತವವಾದ ಅಸ್ತಿತ್ವವಿಲ್ಲ. ಅಂದರೆ 'ಅಭಿಧೇಯತ್ವ' ಎಂಬ ಅರ್ಥದಲ್ಲಿ ಮಾತ್ರ ಅಭಾವವನ್ನು ಪದಾರ್ಥ ಎಂದು ಪರಿಗಣಿಸಬಹುದೇ ಹೊರತು ಉಳಿದ ಭಾವಪದಾರ್ಥಗಳಂತೆ ಗ್ರಾಹ್ಯವಾಗುವ ಅಸ್ತಿತ್ವ ಇದಕ್ಕಿಲ್ಲ.

ಹೀಗಿದ್ದರೂ ತಾರ್ಕಿಕರು ಅಭಾವವನ್ನು ಒಂದು ಪ್ರತ್ಯೇಕಪದಾರ್ಥವೆಂದು ಪರಿಗಣಿಸುತ್ತಾರೆ. ಏಕೆಂದರೆ ಅಪವರ್ಗವು ಆತ್ಯಂತಿಕ ದುಃಖಧ್ವಂಸವೆಂಬ ಒಂದು ಅಭಾವಪ್ರಕಾರವೇ ಆಗಿದೆ. ಪ್ರಧ್ವಂಸಾಭಾವದ ಮೂಲಕ ದುಃಖನಿವಾರಣೆಯಾಗಿ ಅಪವರ್ಗ ಹೊಂದಲ್ಪಡುತ್ತದೆಯಾದ್ದರಿಂದ ಅವರು ಅದನ್ನು ಒಂದು ಸತ್ಯ(Reality)ವೆಂದು ಅಂಗೀಕರಿಸುತ್ತಾರೆ.

ಭಾಟ್ಟಮೀಮಾಂಸಕರು ಅಭಾವವನ್ನು ಭಾವಧರ್ಮವೆಂದು ಪರಿಗಣಿಸುತ್ತಾರೆ. ಪ್ರತಿಯೊಂದು ವಸ್ತುವಿಗೂ ಭಾವಧರ್ಮವಿರುವಂತೆ ಅದರ ನಿಷೇಧಾತ್ಮಕಮುಖವನ್ನು ಪ್ರತಿನಿಧಿಸುವ ಅಭಾವಧರ್ಮವೂ ಇರುತ್ತದೆ. ಅಭಾವವು 'ಅನುಪಲಬ್ಧಿ' ಎಂಬ ಪ್ರಮಾಣದಿಂದ ಗ್ರಹಿಸಲ್ಪಡುತ್ತದೆ. ಪ್ರಾಭಾಕರಮೀಮಾಂಸಕರು ಅಭಾವವನ್ನು ಪ್ರತ್ಯೇಕಪದಾರ್ಥವೆಂದು ಪರಿಗಣಿಸದೆ 'ಕೇವಲಾಧಿಕರಣ' ಎನ್ನುತ್ತಾರೆ. भूतले घटो नास्ति ಎನ್ನುವಲ್ಲಿ ನಾವು ಗ್ರಹಿಸುವುದು ಭೂತಲವನ್ನು ಮಾತ್ರ. ಆದ್ದರಿಂದ ಅಭಾವವು ಕೇವಲಾಧಿಕರಣದಲ್ಲಿಯೇ ಅಂತರ್ಗತವಾಗುತ್ತದೆ. ಆದರೆ ತಾರ್ಕಿಕರು ಈ ವಾದವನ್ನು ಖಂಡಿಸುತ್ತಾ ಕೇವಲಾಧಿಕರಣವು ಕೇವಲ ಆಶ್ರಯದ (ಭೂತಲ) ಜ್ಞಾನವನ್ನು ಮಾತ್ರ ನೀಡಿದರೆ ಅಭಾವವು ಆಶ್ರಯದ ಜೊತೆ ಪ್ರತಿಯೋಗಿಯ (ಘಟ) ಜ್ಞಾನವನ್ನು ನೀಡುತ್ತದೆ ಎನ್ನುತ್ತಾರೆ.

ತಾರ್ಕಿಕರ ಪ್ರಕಾರ ಅಭಾವವು ಇಂದ್ರಿಯಗ್ರಾಹ್ಯವಾಗಿದೆ. येनेन्द्रियेण या व्यक्ति: गृह्यते तेनैवेन्द्रियेण तद्गता जाति: तदभावश्च गृह्यते। ಯಾವ ಇಂದ್ರಿಯದಿಂದ ಒಂದು ವ್ಯಕ್ತಿಯ

ಜ್ಞಾನವಾಗುವುದೋ ಅದೇ ಇಂದ್ರಿಯದಿಂದಲೇ ಆ ವ್ಯಕ್ತಿಗತವಾದ ಜಾತಿಯೂ ಆ ವ್ಯಕ್ತಿಯ ಅಭಾವವೂ ಗ್ರಹಿಸಲ್ಪಡುತ್ತದೆ.

ಇದುವರೆಗೆ ಪದಾರ್ಥಗಳ ಉಲ್ಲೇಖವನ್ನು ಮಾತ್ರ ಮಾಡಿದ ಗ್ರಂಥಕಾರನು ಇನ್ನು ಮುಂದೆ ಪದಾರ್ಥಗಳ ಲಕ್ಷಣಪರೀಕ್ಷೆಗಳನ್ನು ಕ್ರಮವಾಗಿ ಆರಂಭಿಸುತ್ತಾನೆ.

10. ಗಂಧಕ್ಕೆ ಸಮವಾಯಿಕಾರಣವಾಗಿರುವುದೇ ಪೃಥಿವೀ. ಗ್ರಂಥದಲ್ಲಿಯ 'ಗಂಧವತೀ' ಎಂಬಲ್ಲಿ 'ವತ್' ಎಂಬುದು ಸಮವಾಯವನ್ನು ಸೂಚಿಸುತ್ತದೆ. ಕಾಲಿಕ ಮತ್ತು ದೇಶಿಕಸಂಬಂಧದಿಂದ ಕಾಲ ಮತ್ತು ದೇಶಗಳಲ್ಲಿಯೂ ಗಂಧವಿರುವುದರಿಂದ ಅವುಗಳಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ ಇಲ್ಲಿ 'ವತ್' ಎಂಬುದಕ್ಕೆ ಸಮವಾಯಸಂಬಂಧವೆಂಬ ಅರ್ಥವನ್ನು ನೀಡಬೇಕಾಗುತ್ತದೆ. उत्पन्नं द्रव्यं क्षणमगुणमक्रियाकं च तिष्ठति ಎಂಬ ನಿಯಮಕ್ಕನುಗುಣವಾಗಿ ಉತ್ಪತ್ತಿಯ ಪ್ರಥಮಕ್ಷಣದಲ್ಲಿ ಗಂಧವತ್ತ್ವವೆಂಬುದು ಪೃಥಿವಿಗೆ ಅನ್ವಯಿಸುವುದಿಲ್ಲ. ಆದ್ದರಿಂದ गन्धवती ಎಂಬ ವ್ಯಾಖ್ಯೆಯನ್ನು गन्धसमानाधिकरणद्रव्यत्वव्याप्यजातिमती ಎಂದು ವಿವರಿಸುತ್ತಾರೆ. ಎಂದರೆ ಗಂಧವನ್ನು ಹೊಂದಿರುವುದು ಪೃಥಿವೀ. ಅದು ದ್ರವ್ಯತ್ವಕ್ಕೆ ವ್ಯಾಪ್ಯವಾದ (ನ್ಯೂನದೇಶವೃತ್ತಿ) ಜಾತಿಯನ್ನು (ಪೃಥಿವೀತ್ವ) ಹೊಂದಿದೆ. ಆದ್ದರಿಂದ ಗಂಧ ಮತ್ತು ದ್ರವ್ಯತ್ವವ್ಯಾಪ್ಯಜಾತಿ ಇವು ಸಮಾನ ಅಧಿಕರಣವನ್ನು ಹೊಂದಿವೆ. ಹೀಗಾಗಿ ಗಂಧವಿರುವಲ್ಲಿಯೇ ದ್ರವ್ಯತ್ವಕ್ಕೆ ವ್ಯಾಪ್ಯವಾದ ಜಾತಿಯನ್ನು ಹೊಂದಿರುವುದು ಪೃಥಿವೀ ಎಂಬುದು ಪೃಥಿವಿಯ ಲಕ್ಷಣವಾಗುತ್ತದೆ. ಜಲದಲ್ಲಿಯೂ ದ್ರವ್ಯತ್ವ ವ್ಯಾಪ್ಯಜಾತಿಯಿರುವುದರಿಂದ (ಜಲತ್ವ) ಅತಿವ್ಯಾಪ್ತಿ ಬರುತ್ತದೆ. ಅದರ ನಿವಾರಣೆಗಾಗಿ गन्धसमानाधिकरण ಎಂದು ಹೇಳಲಾಗಿದೆ.

ದೀಪಿಕೆಯ ಕೆಲವು ಪಾಠಗಳಲ್ಲಿ गन्धसमानाधिकरणद्रव्यत्वापरजातिमती ಎಂಬ ಪಾಠಾಂತರ ಕಂಡುಬರುತ್ತದೆ. गन्धसमानाधिकरणद्रव्यत्व ಎಂದಾಗ ಜಲದಲ್ಲಿ ಸಂಭವಿಸುವ ಅತಿವ್ಯಾಪ್ತಿಯ ನಿವಾರಣೆಗಾಗಿ 'ಅಪರ' ಎಂಬ ವಿಶೇಷಪದವಿದೆ. ಪೃಥಿವೀಜಲ ಅನ್ಯತರದಲ್ಲಿ ಗಂಧಸಮಾನಾಧಿ-ಕರಣದ್ರವ್ಯತ್ವಾಪರ ಬರುವುದರಿಂದ ಜಲದಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ 'ಜಾತಿ' ಎಂಬ ಪದಪ್ರಯೋಗವಿದೆ. ಸುರಭಿ ಮತ್ತು ಅಸುರಭಿಮಿಶ್ರಿತವಾದ 'ಚಿತ್ರಗಂಧ' ಎಂಬ ಭೇದವನ್ನು ಅಂಗೀಕರಿಸಿಲ್ಲವಾದ್ದರಿಂದ ಗಂಧದ ಎರಡೂ ಪ್ರಕಾರಗಳನ್ನು ಹೊಂದಿದ ಪೃಥಿವೀವಿಷಯದಲ್ಲಿ ಅವ್ಯಾಪ್ತಿ ಬರುತ್ತದೆ. ಏಕೆಂದರೆ ಸುರಭಿಗಂಧಕ್ಕೆ ಅಸುರಭಿಗಂಧವೂ, ಅಸುರಭಿಗಂಧಕ್ಕೆ ಸುರಭಿಗಂಧವೂ ಪರಸ್ಪರಪ್ರತಿಬಂಧಕವಾಗಿ ಗಂಧಪ್ರತೀತಿಯೇ ಉಂಟಾಗುವುದಿಲ್ಲ. ಈ ದೋಷಕ್ಕೆ ಪರಿಹಾರವನ್ನು ಹೀಗೆ ಹೇಳಬಹುದು. ಪೃಥಿವೀವಿಷಯದ ಅವಯವನಿಷ್ಠವಾದ ಸುರಭಿ ಮತ್ತು ಅಸುರಭಿಗಳನ್ನು ಪ್ರತ್ಯೇಕವಾಗಿ ಗ್ರಹಿಸಲು ಸಾಧ್ಯವಿದೆ. ಆದ್ದರಿಂದ ಚಿತ್ರಗಂಧವನ್ನು ಪ್ರತ್ಯೇಕವಾಗಿ ಅಂಗೀಕರಿಸಬೇಕಾದ ಆವಶ್ಯಕತೆ ಇಲ್ಲ ಮತ್ತು ಅಂತಹ ಪೃಥಿವೀವಿಷಯದಲ್ಲಿ ಅವ್ಯಾಪ್ತಿಯೂ ಬರುವುದಿಲ್ಲ. ಇನ್ನು ಕೆಲವೊಮ್ಮೆ ಜಲ ಮತ್ತು ವಾಯುಗಳಲ್ಲಿಯೂ ಗಂಧವು ಗ್ರಹಿಸಲ್ಪಡುತ್ತದೆಯಾದ್ದರಿಂದ ಗಂಧವತ್ತ್ವವೆಂಬ ಲಕ್ಷಣದ ಪ್ರಕಾರ ಜಲ ಮತ್ತು ವಾಯುಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದರೆ ಜಲ ಮತ್ತು ವಾಯುವಿನಲ್ಲಿಯ ಗಂಧ ಪೃಥಿವಿಯ ಸಂಪರ್ಕದಿಂದ ಉಂಟಾದುದು. ಕೆಲವೊಮ್ಮೆ ಪೃಥಿವೀ

ವಿಷಯವಾದ ಕಲ್ಲುಗಳಲ್ಲಿ ಗಂಧವೇ ಕಂಡುಬರದೇ ಅವ್ಯಾಪ್ತಿ ಬರುತ್ತದೆ. ಆದರೆ ಅವುಗಳಲ್ಲಿ ಗಂಧ ಉದ್ಭೂತವಾಗಿಲ್ಲ. ಹೀಗೆ ಉದ್ಭೂತವಾದ ಅಥವಾ ಅನುದ್ಭೂತವಾದ ಗಂಧವನ್ನುಳ್ಳದ್ದೇ ಪೃಥಿವೀ.

ಪೃಥಿವೀ, ಅಪ್, ತೇಜಸ್ ಮತ್ತು ವಾಯುಗಳೆಂಬ ನಾಲ್ಕು ದ್ರವ್ಯಗಳನ್ನು ನಿತ್ಯ ಮತ್ತು ಅನಿತ್ಯಗಳೆಂದು ವಿಭಜಿಸಲಾಗಿದೆ. ನಿತ್ಯವೆಂದರೆ ध्वंसाप्रतियोगित्वम् ಅಥವಾ त्रैकालिक-संसर्गावच्छिन्नत्वम् ಎಂದರೆ ಪ್ರಧ್ವಂಸಾಭಾವಕ್ಕೆ ಯಾವುದು ಪ್ರತಿಯೋಗಿಯಾಗಿರುವುದಿಲ್ಲವೋ ಅದು ಅಥವಾ ತ್ರಿಕಾಲಗಳ ಸಂಬಂಧದಿಂದ ಅವಚ್ಛಿನ್ನವಾಗಿರುವುದು (ಕೂಡಿರುವುದು). ಅನಿತ್ಯತ್ವವೆಂದರೆ ध्वंसप्रतियोगित्वम् ಪ್ರಧ್ವಂಸಾಭಾವವನ್ನು ಕುರಿತು ಪ್ರತಿಯೋಗಿಯಾಗಿರುವುದು.

ಪ್ರಪಂಚದ ಸಕಲಕಾರ್ಯರೂಪಿವಸ್ತುಗಳಿಗೂ ನಿತ್ಯವಾದ ಪರಮಾಣುಗಳೇ ಕಾರಣಗಳಾಗಿವೆ. ಕಿಡಕಿಯಿಂದ ಬಂದ ಸೂರ್ಯಕಿರಣದಲ್ಲಿ ಕಾಣುವ ಅತಿಸೂಕ್ಷ್ಮವಾದ ಧೂಳಿಯ ಕಣದ ಆರನೇ ಒಂದು ಭಾಗವನ್ನು 'ಪರಮಾಣು' ಎನ್ನುತ್ತಾರೆ.

जालसूर्यमरीचिस्थं यत्सूक्ष्मं दृश्यते रजः ।
तस्य षष्ठस्तु यो भागः परमाणुः स उच्यते ॥

ಪರಮಾಣುಗಳು ಜನ್ಯದ್ರವ್ಯದ ಅಂತಿಮಭಾಗಗಳಾಗಿದ್ದು ಅವಯವರಹಿತವೂ ಅತೀಂದ್ರಿಯವೂ ಆಗಿರುತ್ತವೆ. ಇವುಗಳಿಂದ ಉತ್ಪನ್ನವಾದ ಸಕಲದ್ರವ್ಯಗಳೂ ಅನಿತ್ಯವಾಗಿರುತ್ತವೆ.

ಪೃಥಿವಿಯ ಶರೀರೇಂದ್ರಿಯವಿಷಯವೆಂಬ ದ್ವಿತೀಯವಿಭಜನೆಯು ಸಂಪೂರ್ಣ ಪೃಥಿವಿಯದೋ ಅಥವಾ ಕಾರ್ಯರೂಪಿಪೃಥಿವಿಯದೋ ಎಂಬ ಸಂದೇಹವಿದೆ. ಏಕೆಂದರೆ ಶರೀರೇಂದ್ರಿಯವಿಷಯಗಳೆಂಬ ಅನಿತ್ಯವಿಭಾಗಗಳು ನಿತ್ಯರೂಪದ ಪೃಥಿವಿಯ ವಿಭಾಗಗಳಾಗುವ ಸಾಧ್ಯತೆ ಇಲ್ಲ. ಆದರೆ ದೀಪಿಕೆಯಲ್ಲಿ प्रकारान्तरेण विभजते ಎಂದಿರುವುದರಿಂದ ಈ ದ್ವಿತೀಯ ವಿಭಜನೆಯು ಸಂಪೂರ್ಣಪೃಥಿವೀದ್ರವ್ಯದ ವಿಭಾಗವೇ ಆಗಿರುವಂತೆ ತೋರುತ್ತದೆ. ಆದರೆ ಶರೀರೇಂದ್ರಿಯವಿಷಯಗಳು ಜನ್ಯಗಳಾಗಿವೆ. ಜನ್ಯವಾದುದೆಲ್ಲವೂ ಅನಿತ್ಯವಾಗಿರುತ್ತದೆ. ಆದ್ದರಿಂದ ಈ ಪ್ರಕಾರಾಂತರವಿಭಜನೆಯು ಕಾರ್ಯರೂಪಿಪೃಥಿವಿಗೆ ಮಾತ್ರ ಅನ್ವಯಿಸುತ್ತದೆ. ಶರೀರವನ್ನು आत्मनो भोगायतनम् ಎಂದು ಲಕ್ಷಿಸಲಾಗಿದೆ. ಆತ್ಮನ ಭೋಗಕ್ಕೆ ಸಾಧನೀಭೂತವಾದುದು ಅಥವಾ ಆಶ್ರಯವಾದುದು ಶರೀರ. ಭೋಗವೆಂದರೆ सुखदुःखान्यतरसाक्षात्कारः । ಸುಖ ಅಥವಾ ದುಃಖ ಇವೆರಡರಲ್ಲಿ ಒಂದರ ಅನುಭವವೇ ಭೋಗ. ಶರೀರವನ್ನು अन्त्यावयवित्वे सति चेष्टाश्रयम् ಎಂದೂ ವ್ಯಾಖ್ಯಾನಿಸಲಾಗಿದೆ. ಇದರ ಪ್ರಕಾರ ಅಂತ್ಯಾವಯವಿಯಾಗಿದ್ದು ಐಚ್ಛಿಕಕ್ರಿಯೆಗಳಿಗೆ ಆಶ್ರಯ ವಾಗಿರುವುದು ಶರೀರ. ಅಂತ್ಯಾವಯವಿ ಎಂದರೆ अवयवजन्यत्वे सति अवयवि-अजनकत्वम् ಅಥವಾ द्रव्यान्तरानारम्भकद्रव्यत्वम्। ಅವಯವಗಳಿಂದ ಜನಿಸಿ ತಾನು ಬೇರೊಂದು ಅವಯವಿಯ ಜನನಕ್ಕೆ ಕಾರಣವಾಗದಿರುವುದು ಅಥವಾ ತಾನು ದ್ರವ್ಯವಾಗಿದ್ದು ಇನ್ನೊಂದು ದ್ರವ್ಯದ ಉತ್ಪತ್ತಿಗೆ ಕಾರಣವಾಗದಿರುವುದು. ಚೇಷ್ಟಾ ಎಂಬುದನ್ನು हिताहितप्राप्तिपरिहारार्थक्रिया 'ಹಿತವನ್ನು ಪಡೆಯುವುದಕ್ಕೆ ಅಹಿತವನ್ನು ನಿವಾರಿಸುವುದಕ್ಕೆ ಅನುಕೂಲವಾದ ಕ್ರಿಯೆ' ಎಂದು ವಿವರಿಸುತ್ತಾರೆ.

ಇಂತಹ ಪಾರ್ಥಿವಶರೀರವು 'ಯೋನಿಜ' ಮತ್ತು 'ಅಯೋನಿಜ' ಎಂದು ದ್ವಿವಿಧ. ಯೋನಿಜವು 'ಜರಾಯುಜ' ಮತ್ತು 'ಅಂಡಜ' ಎಂದು ಎರಡು ವಿಧ. ಗರ್ಭಾಶಯದಿಂದ ಜನಿಸುವ

ಮಾನುಷಾದಿ ಪ್ರಾಣಿಶರೀರವು ಜರಾಯುಜ. ಮೊಟ್ಟೆಯೊಡೆದು ಹುಟ್ಟುವ ಹಕ್ಕಿ ಹಾವು ಮುಂತಾದವು ಅಂಡಜ. ಅಯೋನಿಜವು ಸ್ವೇದಜ ಮತ್ತು ಉದ್ಭಿಜ್ಜ ಎಂದು ಎರಡು ವಿಧ. ಶಾಖದಿಂದ ಹುಟ್ಟುವ ಕ್ರಿಮಿಕೀಟಾದಿಗಳು ಸ್ವೇದಜಗಳೂ, ಭೂಮಿಯನ್ನು ಭೇದಿಸಿಕೊಂಡು ಹುಟ್ಟುವ ಸಸ್ಯಾದಿಗಳು ಉದ್ಭಿಜ್ಜಗಳೂ ಆಗಿವೆ. ಇವುಗಳ ಜೊತೆ ಅದೃಷ್ಟದಿಂದ ಜನಿಸುವ ದೇವಾದಿಶರೀರವೂ ಅಯೋನಿಜವಾಗಿದ್ದು 'ಸ್ವಯಂಭೂ' ಆಗಿದೆ.

ಇಂದ್ರಿಯದ ಲಕ್ಷಣ ಹೀಗಿದೆ— शब्देतरोद्भूतविशेषगुणानाश्रयत्वे सति ज्ञानकारणमनः-संयोगाश्रयम्। ಶಬ್ದವನ್ನು ಹೊರತುಪಡಿಸಿ ಉಳಿದ ಉದ್ಭೂತವಿಶೇಷಗುಣಗಳಿಗೆ (ರೂಪ, ರಸ, ಗಂಧ, ಮತ್ತು ಸ್ಪರ್ಶಗಳಿಗೆ) ಆಶ್ರಯವಾಗದೇ ಜ್ಞಾನಕ್ಕೆ ಕಾರಣವಾದ ಮನಃಸಂಯೋಗಕ್ಕೆ ಆಶ್ರಯವಾಗಿರುವುದು ಇಂದ್ರಿಯ. ತಾರ್ಕಿಕರ ಪ್ರಕಾರ ಆತ್ಮವು ಮನಸ್ಸಿನೊಂದಿಗೆ, ಮನಸ್ಸು ಇಂದ್ರಿಯದೊಂದಿಗೆ, ಇಂದ್ರಿಯವು ವಿಷಯದೊಂದಿಗೆ ಸಂಯೋಗ ಹೊಂದುವುದರಿಂದ ಪ್ರತ್ಯಕ್ಷಾನುಭವವಾಗುತ್ತದೆ.

ಮೂಗಿನ ಹೊರಳೆಗಳ ಒಳ ಮೇಲ್ಭಾಗದಲ್ಲಿರುವ ಗಂಧಗ್ರಾಹಕಕೋಶಗಳಲ್ಲಿ (Olfactory cells) ಗಂಧದ ಅಣುಗಳ ಸಂಪರ್ಕದಿಂದ ರಾಸಾಯನಿಕಕ್ರಿಯೆ ಉಂಟಾಗಿ ಗಂಧಾನುಭವ-ವಾಗುತ್ತದೆಯೆಂಬುದು ಆಧುನಿಕವಿಜ್ಞಾನದ ಅಭಿಮತ. ವಿಷಯವನ್ನು ಸಾಮಾನ್ಯವಾಗಿ ಶರೀರೇಂದ್ರಿಯಗಳಿಂದ ಭಿನ್ನವಾದುದೆಂದು ನಿರೂಪಿಸಬಹುದಾದರೂ ಪರಿಷ್ಕೃತಲಕ್ಷಣ ಹೀಗಿದೆ: जन्यत्वे सति शरीरेन्द्रियभिन्नत्वे सति उपभोगसाधनत्वम् ಎಂದರೆ ಜನಿಸಿದ್ದು, ಶರೀರೇಂದ್ರಿಯಗಳಿಂದ ಭಿನ್ನವಾಗಿದ್ದು ಉಪಭೋಗಕ್ಕೆ ಯಾವುದು ಸಾಧನವಾಗಿರುವುದೋ ಅದೇ ವಿಷಯ.

ಈ ಶರೀರೇಂದ್ರಿಯ ವಿಷಯಗಳ ಲಕ್ಷಣಗಳು ಜಲ, ತೇಜಸ್ ಮತ್ತು ವಾಯುವಿನ ಶರೀರೇಂದ್ರಿಯವಿಷಯಗಳಿಗೂ ಅನ್ವಯಿಸುತ್ತವೆ.

11. ವೈಶೇಷಿಕಸೂತ್ರಗಳು 'ಅಪ್'ನ್ನು रूपरसस्पर्शवत्य आपो द्रवाः स्निग्धाः ಎಂದು ವ್ಯಾಖ್ಯಾನಿಸುತ್ತವೆ. ಆದರೆ ದೀಪಿಕೆಯ ಪ್ರಕಾರ ಪರಿಷ್ಕೃತವಾದ ಲಕ್ಷಣ शीतस्पर्शसमानाधि-करणद्रव्यत्वापरजातिमत्त्वम् ಎಂದಾಗುತ್ತದೆ. ಈ ಲಕ್ಷಣದ ಸಮಾನವಿವರಣೆಯನ್ನು ಪೃಥಿವೀಲಕ್ಷಣದಲ್ಲಿ ಕೊಡಲಾಗಿದ್ದು ಅದನ್ನೇ ಇಲ್ಲಿಯೂ ಅನ್ವಯಿಸಿಕೊಳ್ಳಬೇಕು. 'ಶಿಲೆಯು ತಂಪಾಗಿದೆ' ಎಂಬ ಅನುಭವದಲ್ಲಿ ಶಿಲೆಯಲ್ಲಿಯ ಶೈತ್ಯಗುಣವು ಜಲಸಂಪರ್ಕದಿಂದ ಉಂಟಾದುದು ಎಂಬುದು ತಾರ್ಕಿಕರ ಮತ.

ವಿಷಯನಿರೂಪಣೆಯಲ್ಲಿ ಐಕ್ಯವನ್ನು ತರುವುದಕ್ಕಾಗಿ ಜಲಸಂಬಂಧಿಶರೀರವು ವರುಣ-ಲೋಕದಲ್ಲಿದೆ ಎಂದು ಕಲ್ಪಿಸಲಾಗಿದೆ. ಇದೇ ರೀತಿಯಲ್ಲಿ ತೈಜಸ ಮತ್ತು ವಾಯವೀಯ ಶರೀರಗಳು ಕೂಡ. ರಸಗ್ರಾಹಕವಾದ ಜಲೀಯ ಇಂದ್ರಿಯವು ನಾಲಿಗೆಯ ತುದಿಯಲ್ಲಿರುತ್ತದೆ ಎಂಬುದನ್ನು ಆಧುನಿಕವಿಜ್ಞಾನ ಅಂಗೀಕರಿಸುವುದಿಲ್ಲ. ರುಚಿಯನ್ನು ಗ್ರಹಿಸುವ 'ಮೊಗ್ಗುಗಳು' ನಾಲಿಗೆಯ ವಿಭಿನ್ನ ಭಾಗಗಳಲ್ಲಿ ಪಸರಿಸಿರುತ್ತವೆ.

12. ವೈಶೇಷಿಕಸೂತ್ರಗಳು ತೇಜಸ್‌ನ ಲಕ್ಷಣವನ್ನು 'ರೂಪಸ್ಪರ್ಶವತ್' ಎಂದು ಕೊಡುತ್ತವೆ. ತೇಜಸ್ಸಿನಲ್ಲಿ ಭಾಸ್ವರರೂಪ ಮತ್ತು ಉಷ್ಣಸ್ಪರ್ಶಗಳಿರುತ್ತವೆ. ಇದರ ಪರಿಷ್ಕೃತಲಕ್ಷಣವನ್ನು उष्णस्पर्शवद्वृत्ति-द्रव्यत्वापरजातिमत्त्वम् ಎಂದು ಕೊಡಲಾಗಿದೆ.

ತೇಜಸ್ಸಿನ ವಿಷಯವು ಇಂಧನದ ಆಧಾರದಿಂದ ಚತುರ್ವಿಧವಾಗಿದೆ. ಭೌಮವಾದ ಅಗ್ನಿ ಮುಂತಾದವು ಕಟ್ಟಿಗೆ ಮುಂತಾದ ಪಾರ್ಥಿವೇಂಧನಗಳನ್ನು ಹೊಂದಿದೆ. ಸೂರ್ಯ, ಚಂದ್ರ, ಮಿಂಚು ಮತ್ತು ವಡವಾಗ್ನಿಗಳು ಜಲವನ್ನು ಇಂಧನವಾಗಿ ಹೊಂದಿ ತೇಜಸ್ಸಿನ ದಿವ್ಯವಿಷಯವಾಗಿವೆ. ಪಾರ್ಥಿವ ಮತ್ತು ಜಲ ಇವೆರಡೂ ಇಂಧನಗಳನ್ನು ಹೊಂದಿದ ಉದರಸಂಬಂಧಿ ಔದರ್ಯವು 'ಜಾಠರಾನಲ' ಎಂದೂ ಕರೆಯಲ್ಪಡುತ್ತದೆ. ಆಕರಜ ಅಥವಾ ಖನಿಜಗಳಾದ ಸುವರ್ಣ, ರಜತ, ತಾಮ್ರ, ರೀತಿ (ಹಿತ್ತಾಳೆ), ಕಾಂಸ್ಯ (ಕಂಚು), ತ್ರಪು (ತವರ), ಸೀಸ, ಕಾಲಾಯಸ (ಕಬ್ಬಿಣ) ಇವು ಎಂಟು ಲೋಹಗಳು ಅನುಭಯೇಂಧನಗಳಾಗಿವೆ.

ತಾರ್ಕಿಕರು ಸುವರ್ಣ ಮುಂತಾದ ಲೋಹಗಳನ್ನು ತೇಜಸ್‌ನ ವಿಷಯವೆಂದು ಅಂಗೀಕರಿಸುವುದಕ್ಕೆ ಅವರು ಕೊಡುವ ಕಾರಣ ಹೀಗಿದೆ: ಸುವರ್ಣಾದಿಗಳು ರೂಪ-ಸಹಿತವಾದುದರಿಂದ ವಾಯು, ಆಕಾಶ, ಕಾಲ, ದಿಕ್, ಆತ್ಮಾ ಮತ್ತು ಮನಸ್ ಇವುಗಳಲ್ಲಿ ಅಂತರ್ಗತವಾಗುವುದಿಲ್ಲ. ಹಾಗೆಯೇ ಲೋಹಗಳಲ್ಲಿಯ ದ್ರವತ್ವವು ನೈಮಿತ್ತಿಕವಾದುದರಿಂದ ಅವು ಜಲವೂ ಅಲ್ಲ. ಅತ್ಯಂತಾಗ್ನಿಸಂಯೋಗವಾಗಿ ಪ್ರತಿಬಂಧಕವಿಲ್ಲದಿರುವಾಗಲೂ ಇವುಗಳಲ್ಲಿಯ ದ್ರವತ್ವವು ನಾಶವಾಗುವುದಿಲ್ಲ. ಆದರೆ ಪಾರ್ಥಿವವಿಷಯಗಳಾದ ತುಪ್ಪ ಮುಂತಾದವುಗಳ ದ್ರವತ್ವ ಅತ್ಯಂತಾಗ್ನಿಸಂಯೋಗದಲ್ಲಿ ನಾಶವಾಗುವುದು ಲೋಕಪ್ರಸಿದ್ಧವಾಗಿದೆ. ಆದ್ದರಿಂದ ಸುವರ್ಣಾದಿಗಳು ಪಾರ್ಥಿವವೂ ಅಲ್ಲ. ಹೀಗಾಗಿ ಅವು ಉಳಿದ ಒಂದೇ ದ್ರವ್ಯವಾದ ತೇಜಸ್ಸಿನ ವಿಷಯಗಳಾಗುತ್ತವೆ.

ತಾರ್ಕಿಕರ ಈ ವಾದವನ್ನು ಆಧುನಿಕವಿಜ್ಞಾನ ಅಂಗೀಕರಿಸುವುದಿಲ್ಲ. ಏಕೆಂದರೆ ಇಂದಿನ ವಿಜ್ಞಾನಿಗಳು ಅತ್ಯಂತಾಗ್ನಿಸಂಯೋಗದಲ್ಲಿ ಸುವರ್ಣಾದಿಗಳ ದ್ರವತ್ವ ನಾಶವಾಗಿ ಅವು ಆವಿಯಾಗುವುದನ್ನು ಸಿದ್ಧಪಡಿಸಿದ್ದಾರೆ. ಪ್ರಾಚೀನಕಾಲದಲ್ಲಿ ಸುವರ್ಣಾದಿಗಳನ್ನು ಪರೀಕ್ಷಿಸುವ ಅತ್ಯಂತಾಗ್ನಿಯ ಶಾಖಪ್ರಮಾಣವು ಉಪಕರಣಗಳ ನ್ಯೂನತೆಯಿಂದ ಇಂದಿನ ವಿಜ್ಞಾನಕ್ಕಿಂತ ಅಲ್ಪಪ್ರಮಾಣದಲ್ಲಿದ್ದಿರಬಹುದು. ವಾಸ್ತವವಾಗಿ ಸುವರ್ಣಾದಿಗಳು ಪೃಥಿವಿಯ ವಿಷಯವಾಗಿವೆ. ಆದರೆ ಅವುಗಳ ಭಾಸ್ವರ(ಹೊಳೆಯುವ)ರೂಪವು ತಾರ್ಕಿಕರು ಅವುಗಳನ್ನು ತೈಜಸವಿಷಯವೆಂದು ಪರಿಗಣಿಸಲು ಕಾರಣವಾಗಿರಬಹುದು.

13. ವಾಯುಲಕ್ಷಣದಲ್ಲಿ ರೂಪರಹಿತತ್ವ ಮತ್ತು ಸ್ಪರ್ಶವತ್ತ್ವ ಎಂಬ ಎರಡು ದಳಗಳಿವೆ. ಕೇವಲ ರೂಪರಹಿತವಾದುದು ವಾಯು ಎಂದಲ್ಲಿ ಆಕಾಶಾದಿಗಳು ರೂಪರಹಿತವಾಗಿರುವುದರಿಂದ ಅವುಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಇನ್ನು ಕೇವಲ ಸ್ಪರ್ಶಸಹಿತವಾದುದು ವಾಯು ಎಂದರೆ ಪೃಥಿವ್ಯಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ ದಳದ್ವಯವನ್ನು ಪ್ರಯೋಗಿಸಬೇಕು. समवायेन रूपानधिकरणत्वे सति स्पर्शवत्त्वम् ಎನ್ನುವುದು ವಾಯುವಿನ ಪರಿಷ್ಕೃತವಾದ ಲಕ್ಷಣ.

ಪ್ರಾಚೀನ ನೈಯಾಯಿಕರನ್ನು ಅನುಸರಿಸುತ್ತ ಗ್ರಂಥಕಾರನು ವಾಯುವು ಸ್ಪರ್ಶಾನುಮೇಯವೇ ಹೊರತು ಪ್ರತ್ಯಕ್ಷವಲ್ಲ ಎಂಬ ಅಭಿಪ್ರಾಯಕ್ಕೆ ಬರುತ್ತಾನೆ. ಆದರೆ ಆಧುನಿಕ ನೈಯಾಯಿಕರು ಮತ್ತು ಮೀಮಾಂಸಕರು ವಾಯುವನ್ನು ಪ್ರತ್ಯಕ್ಷ ಎಂದೇ ಪರಿಗಣಿಸುತ್ತಾರೆ.

ಶರೀರದೊಳಗೆ ಸಂಚರಿಸುವ ಪ್ರಾಣವು ಒಂದೇ ಆಗಿದ್ದರೂ ಆಶ್ರಯ ಮತ್ತು ಕಾರ್ಯ-ಭೇದದಿಂದ ವಿಭಿನ್ನಸಂಜ್ಞೆಗಳನ್ನು ಹೊಂದಿದೆ. ಅದರ ಕ್ರಿಯೆ, ಸಂಜ್ಞೆ ಮತ್ತು ಸ್ಥಾನಗಳು ಹೀಗಿವೆ:

मुखनासिकाभ्यां निष्क्रमणप्रवेशनात् प्राणः। हृदि।
मलादीनाम् अधोनयनात् अपानः। गुदे।
भुक्तस्य पाकार्थं जाठराग्नेः समुन्नयनात् समानः। नाभौ।
रसादेः ऊर्ध्वनयनात् उदानः। कण्ठे।
नाडीमुखेषु वितननात् व्यानः। सर्वशरीरे।

**ತಾರ್ಕಿಕರ ಪರಮಾಣುವಾದ**

ಇದುವರೆಗೆ ನಿರೂಪಿತವಾದ ಪೃಥಿವ್ಯಪ್‌ತೇಜೋವಾಯುಗಳು ಮಾತ್ರ ಕಾರ್ಯದ್ರವ್ಯಗಳಾಗು-ವುದರಿಂದ ಅವುಗಳ ಉತ್ಪತ್ತಿ ಮತ್ತು ವಿನಾಶಕ್ರಮವನ್ನು ಪ್ರಸ್ತಾಪಿಸುವುದು ಸಂದರ್ಭೋಚಿತ-ವಾಗುತ್ತದೆ.

ನಮಗೆ ಪ್ರತ್ಯಕ್ಷವಾಗುವ ಈ ಪ್ರಪಂಚವು ಅನೇಕ ಅವಯವಗಳಿಂದ ನಿರ್ಮಿತವಾಗಿದೆ. ಈ ಅವಯವಗಳನ್ನು ವಿಭಜಿಸುತ್ತ ಹೋದರೆ 'ತ್ರ್ಯಣುಕ'ವನ್ನು ತಲುಪುತ್ತೇವೆ. (ತ್ರ್ಯಣುಕ ಎಂದರೆ ಬಿಸಿಲುಕೋಲಿನಲ್ಲಿ ಕಾಣುವ ಅತಿಸೂಕ್ಷ್ಮವಾದ ಧೂಳಿಕಣ.) ಇದು ಮೂರು ದ್ವ್ಯಣುಕಗಳಿಂದ ಕೂಡಿದ್ದು ಪ್ರತಿಯೊಂದು ದ್ವ್ಯಣುಕದಲ್ಲಿಯೂ ಎರಡು ಪರಮಾಣುಗಳಿವೆ. ಅನವಸ್ಥಾದೋಷದ ನಿವಾರಣೆಗಾಗಿ ತಾರ್ಕಿಕರು ವಿಭಜನೆಯನ್ನು ಇಲ್ಲಿಗೆ ಸ್ಥಗಿತಗೊಳಿಸುತ್ತಾರೆ.

ಅದುವರೆಗೆ ಕ್ರಿಯಾರಹಿತವಾಗಿದ್ದ ಪರಮಾಣುಗಳಲ್ಲಿ ಈಶ್ವರನ ಇಚ್ಛೆಯಿಂದ ಕ್ರಿಯೆ ಕಂಡು ಬಂದು ಎರಡೆರಡು ಪರಮಾಣುಗಳು ಸೇರಿ ದ್ವ್ಯಣುಕಗಳು ಉತ್ಪತ್ತಿಯಾಗುತ್ತವೆ. ಇಂತಹ ದ್ವ್ಯಣುಕತ್ರಯ ಸೇರಿ ತ್ರ್ಯಣುಕಗಳು, ಅವುಗಳಿಂದ ಚತುರಣುಕಗಳು ಹೀಗೆ ಮಹತ್ ದ್ರವ್ಯದ ಸೃಷ್ಟಿಯಾಗುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಈಶ್ವರನ ಇಚ್ಛೆಯಿಂದ ಪರಮಾಣುಗಳು ವಿಘಟನೆಗೊಂಡು ಉತ್ಪನ್ನಕಾರ್ಯದ್ರವ್ಯಗಳಾದ ಪೃಥಿವ್ಯಾದಿಗಳು ನಾಶವಾಗುತ್ತವೆ. ಇದನ್ನೇ 'ಅವಾಂತರಪ್ರಲಯ' ಎನ್ನುತ್ತಾರೆ. ಸೃಷ್ಟಿಗೆ ಪರಮಾಣುಗಳ ಸಂಯೋಗ ಕಾರಣವಾದರೆ ಪ್ರಲಯಕ್ಕೆ ಅವುಗಳ ವಿಭಾಗವೇ ಕಾರಣ. ಸೃಷ್ಟಿಯ ಮೊದಲು ಹಾಗೂ ಪ್ರಲಯದ ಅನಂತರ ಪರಮಾಣುಗಳು ಸಂಬಂಧರಹಿತವಾದ ಕೇವಲಾವಸ್ಥೆಯಲ್ಲಿರುವ ವಿಶೇಷಗಳು.

ಉಪಕರಣಗಳ ಸಹಾಯದಿಂದ ಆಧುನಿಕವಿಜ್ಞಾನಿಗಳು ತಾರ್ಕಿಕರ ಪರಮಾಣುವಿಗಿಂತ ಅತಿಸೂಕ್ಷ್ಮವಾದ ಅಂಶವನ್ನು ಪರಮಾಣುವೆಂದು ಗುರುತಿಸಿದರೂ ವಿಭಜನೆಯ ಕ್ರಮದ ಅಂತಿಮ ಅವಿಭಾಜ್ಯ ಅಂಶವೇ ಪರಮಾಣುವೆಂಬ ತಾತ್ತ್ವಿಕನೆಲೆಯಲ್ಲಿ ತಾರ್ಕಿಕರಿಗೂ ಆಧುನಿಕವಿಜ್ಞಾನಿಗಳಿಗೂ ವ್ಯತ್ಯಾಸವಿಲ್ಲ (10ನೆಯ ಹಾಗೂ 21ನೆಯ ಘಟಕಗಳನ್ನೂ ನೋಡಿ).

14. ಆಕಾಶದ ಲಕ್ಷಣದಲ್ಲಿ 'ಗುಣ'ಪದಪ್ರಯೋಗವು ಶಬ್ದವೊಂದೇ ಆಕಾಶದ ವಿಶೇಷಗುಣ ಎಂಬುದನ್ನು ತೋರಿಸುವುದಕ್ಕಾಗಿಯೇ ಹೊರತು ಅತಿವ್ಯಾಪ್ತ್ಯಾದಿದೋಷನಿವಾರಣೆಗಾಗಿ ಅಲ್ಲ. ಆಕಾಶವು ಅನೇಕವೆಂಬುದರಲ್ಲಿ ಪ್ರಮಾಣವಿಲ್ಲ. 'ಘಟಾಕಾಶ' 'ಪಟಾಕಾಶ' ಎಂಬ ಪ್ರತೀತಿಗಳು ಉಪಾಧಿ ಆಶ್ರಿತಗಳು.

'ವಿಭು' ಎಂದರೆ ಸರ್ವಮೂರ್ತದ್ರವ್ಯಗಳ ಸಂಯೋಗವನ್ನು ಹೊಂದಿರುವುದು. सर्वमूर्तद्रव्यसंयोगित्वं विभुत्वम्। ಪೃಥಿವೀ, ಅಪ್, ತೇಜಸ್, ವಾಯು ಮತ್ತು ಮನಸ್ ಇವು ಮೂರ್ತದ್ರವ್ಯಗಳು. ಮೂರ್ತತ್ವವೆಂದರೆ परिच्छिन्नपरिमाणवत्त्वम् ಅಥವಾ क्रियावत्त्वम्। ನಿಶ್ಚಿತವಾದ ಪರಿಮಾಣವಿರುವುದು ಅಥವಾ ಕ್ರಿಯೆಯನ್ನು ಹೊಂದಿರುವುದು ಎಂದರ್ಥ. ಎಲ್ಲ ವಿಭುದ್ರವ್ಯಗಳೂ ನಿತ್ಯವಾಗಿರುತ್ತವೆ.

ಪೃಥಿವ್ಯಪ್ತೇಜೋವಾಯ್ವಾಕಾಶಗಳು ಭೂತದ್ರವ್ಯಗಳು. ಭೂತತ್ವವೆಂದರೆ बहिरिन्द्रियग्राह्य-विशेषगुणवत्त्वम्। ಚಕ್ಷುರಾದಿಬಾಹ್ಯೇಂದ್ರಿಯಗಳಿಂದ ಗ್ರಾಹ್ಯವಾದ ವಿಶೇಷಗುಣವನ್ನು ಹೊಂದಿರುವಿಕೆ ಎಂದರ್ಥ. ಮೂರ್ತದ್ರವ್ಯಗಳು ಸೀಮಿತವಾದ, ನಿರ್ದಿಷ್ಟವಾದ ಪರಿಮಾಣಗಳನ್ನು ಹೊಂದಿದ್ದರೆ ಭೂತದ್ರವ್ಯಗಳು ಹಾಗಿರಲೇಬೇಕೆಂದಿಲ್ಲ ಮತ್ತು ಭೂತದ್ರವ್ಯಗಳು ಪ್ರತ್ಯೇಕ ಅಥವಾ ಸಾಮೂಹಿಕವಾಗಿ ಪ್ರಪಂಚದ ಸಕಲಜನ್ಯದ್ರವ್ಯಗಳ ಉಪಾದಾನಕಾರಣಗಳಾಗಿರುತ್ತವೆ.

ಎಲ್ಲದಕ್ಕೂ ಆಧಾರಭೂತವಾದುದು ಮತ್ತು ಸಕಲಕಾರ್ಯಗಳಿಗೂ ನಿಮಿತ್ತಕಾರಣವಾದುದು ಕಾಲ. ವ್ಯವಹಾರವೆಂದರೆ बुबोधयिषापूर्वकवाक्यप्रयोगः ಅಥವಾ ज्ञानजनकशब्दप्रयोगः। ಕೇವಲ ವ್ಯವಹಾರಹೇತುವೇ ಕಾಲವೆಂದರೆ ಘಟಾದಿಗಳಲ್ಲಿ ಅತಿವ್ಯಾಪ್ತಿ ಬರುವುದರಿಂದ अतीतादि ಎಂಬ ಪದಪ್ರಯೋಗವಿದೆ. ಅತೀತ, ವರ್ತಮಾನ, ಭವಿಷ್ಯತ್ ಮುಂತಾದ ವಿಭಾಗಗಳು ಉಪಾಧಿ ಆಶ್ರಿತವಾಗಿವೆ.

ಸಾಂಖ್ಯರು ಕಾಲವನ್ನು ಆಕಾಶದಲ್ಲಿಯೇ ಅಂತರ್ಗತಗೊಳಿಸುತ್ತಾರೆ. ನೈಯಾಯಿಕರು ಕಾಲವನ್ನು ಅನೇಕಕ್ಷಣಗಳ ಸಮೂಹವೆಂದೂ ಅತೀಂದ್ರಿಯವೆಂದೂ ಪ್ರತಿಪಾದಿಸುತ್ತಾರೆ.

ದಿಕ್ ಕೂಡ ಎಲ್ಲವಕ್ಕೂ ಆಧಾರಭೂತವಾಗಿದ್ದು ಸಕಲಕಾರ್ಯಗಳಿಗೂ ನಿಮಿತ್ತಕಾರಣವಾಗಿದೆ. ಪೂರ್ವ, ಪಶ್ಚಿಮ ಇತ್ಯಾದಿ ದಿಕ್ ವಿಭಾಗವು ಉಪಾಧಿ ಆಶ್ರಿತವಾಗಿದೆ.

ಆಪಾತತಃ ಆಕಾಶ ಮತ್ತು ದಿಕ್ ಇವೆರಡೂ ಒಂದೇ ಎಂದು ತೋರಿದರೂ ಇವುಗಳಲ್ಲಿ ವ್ಯತ್ಯಾಸವಿದೆ. ಆಕಾಶವು ಭೂತದ್ರವ್ಯವಾದರೆ ದಿಕ್ ಭೂತದ್ರವ್ಯವಲ್ಲ. ಆಕಾಶಕ್ಕೆ ಶಬ್ದ ಎಂಬ ವಿಶೇಷ ಗುಣವಿದ್ದರೆ ದಿಕ್‌ಗೆ ಯಾವುದೇ ವಿಶೇಷ ಗುಣವಿಲ್ಲ.

ಕಾಲ ಮತ್ತು ದಿಕ್(ದೇಶ)—ಇವು ಅತ್ಯಂತಪ್ರಧಾನವಾದ ತತ್ತ್ವಗಳು. ಪ್ರತಿಯೊಂದೂ ಕಾಲಿಕ ಮತ್ತು ದೈಶಿಕಸಂಬಂಧದಿಂದ ಅವಚ್ಛಿನ್ನವಾಗಿರುತ್ತವೆ. ಒಂದು ವಸ್ತು ಅಥವಾ ಘಟನೆಗೆ ಸಂಬಂಧಿಸಿ-ದಂತೆ ಕಾಲದ ಸಂಬಂಧವು ಸ್ಥಾಯಿಯಾಗಿರುತ್ತದೆ. ಆದ್ದರಿಂದಲೇ ಕಾಲವನ್ನು नियतोपाध्युन्नायिका ಎನ್ನುತ್ತಾರೆ. ಆದರೆ ಕಾಲದ ಒಂದು ಅವಧಿಗೆ ಸಂಬಂಧಿಸಿದಂತೆ ದಿಕ್ ಅಥವಾ ದೇಶದ ಸಂಬಂಧವು ಭಿನ್ನವಾಗಿರಬಹುದು. ಕಾಲದ ಒಂದೇ ಬಿಂದುವಿನಲ್ಲಿ ಒಬ್ಬನಿಗೆ ಪೂರ್ವವಾದುದು ಇನ್ನೊಬ್ಬನಿಗೆ ಪಶ್ಚಿಮವಾಗಬಹುದು. ಆದ್ದರಿಂದ ದಿಕ್ಕನ್ನು अनियतोपाध्युन्नायिका ಎನ್ನುತ್ತಾರೆ.

15. ಆತ್ಮದ ಲಕ್ಷಣದಲ್ಲಿಯ 'ಅಧಿಕರಣ' ಎಂಬ ಪದಕ್ಕೆ ಸಮವಾಯಸಂಬಂಧದಿಂದ ಜ್ಞಾನಕ್ಕೆ ಆಶ್ರಯವಾದುದು ಎಂದರ್ಥ. ಇಲ್ಲದಿದ್ದರೆ ಕಾಲಿಕ ಮತ್ತು ದೈಶಿಕಸಂಬಂಧದಿಂದ ಸರ್ವಾಧಾರವಾದ ಕಾಲ ಮತ್ತು ದೇಶಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. 'ಜ್ಞಾನ' ಎಂಬ ಪದವನ್ನು ಪ್ರಯೋಗಿಸದಿದ್ದರೆ ಭೂತಲಾದಿಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಏಕೆಂದರೆ ಅವು ಕೂಡ ಅಧಿಕರಣಗಳಾಗಿವೆ.

ದೀಪಿಕೆಯಲ್ಲಿ ಪರಮಾತ್ಮನ ಲಕ್ಷಣವನ್ನು नित्यज्ञानाधिकरणत्वम् ಎಂದು ಕೊಡಲಾಗಿದೆ. ಪರಮಾತ್ಮನು ಪ್ರತ್ಯಕ್ಷಜ್ಞಾನಕ್ಕೆ ವಿಷಯನಲ್ಲವಾದ್ದರಿಂದ ಪರಮಾತ್ಮನ ಅಸ್ತಿತ್ವವನ್ನು ಪ್ರತ್ಯಕ್ಷ ಪ್ರಮಾಣದಿಂದ ಸಾಧಿಸಲಾಗುವುದಿಲ್ಲ.

ಉಪಮಾನಪ್ರಮಾಣದಲ್ಲಿ ಜ್ಞೇಯವಸ್ತುಸದೃಶವಾದ ಇನ್ನೊಂದು ವಸ್ತುವಿನ ಆವಶ್ಯಕತೆ ಇದೆ. ಆದರೆ ಈಶ್ವರಸದೃಶವಾದ ವಸ್ತ್ವಂತರದ ಅಭಾವದಿಂದ ಉಪಮಾನವೂ ಪ್ರಮಾಣವಾಗುವುದಿಲ್ಲ. ಇನ್ನು ಶಬ್ದ ಅಥವಾ ಆಗಮಪ್ರಮಾಣದಿಂದಲೂ ಈಶ್ವರಾಸ್ತಿತ್ವವನ್ನು ಸಾಧಿಸಲು ಸಾಧ್ಯವಿಲ್ಲ. ಏಕೆಂದರೆ ಆಗಮವನ್ನು ಪ್ರಮಾಣವೆಂದು ಅಂಗೀಕರಿಸುವುದಕ್ಕೆ ಅದು ಈಶ್ವರೋಕ್ತವಾದುದು ಎನ್ನುವ ವೇದವಾಕ್ಯವೇ ಪ್ರಮಾಣವಾಗಿದೆ. ಈಶ್ವರೋಕ್ತವಾದುದರಿಂದ ವೇದಪ್ರಾಮಾಣ್ಯವನ್ನು ಅಂಗೀಕರಿಸುವಿಕೆ ಮತ್ತು ವೇದೋಕ್ತವಾದುದರಿಂದ ಈಶ್ವರಾಸ್ತಿತ್ವವನ್ನು ಅಂಗೀಕರಿಸುವಿಕೆ ಇವು ಸ್ವಸಿದ್ಧಿಗಾಗಿ ಒಂದು ಇನ್ನೊಂದನ್ನು ಆಶ್ರಯಿಸುತ್ತವೆ. ಹೀಗೆ ಅನ್ಯೋನ್ಯಾಶ್ರಯದೋಷ ಬರುವುದರಿಂದ ಈಶ್ವರಾಸ್ತಿತ್ವಸ್ಥಾಪನೆಯಲ್ಲಿ ಆಗಮವು ಪ್ರಮಾಣವಲ್ಲ. ಹೀಗೆ ಅಂಗೀಕೃತಪ್ರಮಾಣ ಚತುಷ್ಟಯಗಳಲ್ಲಿ ಪ್ರತ್ಯಕ್ಷ, ಉಪಮಾನ ಮತ್ತು ಶಬ್ದಗಳು ನಿರಸ್ತವಾದ ಮೇಲೆ ಉಳಿದುದು ಅನುಮಾನ ಪ್ರಮಾಣ-ವೊಂದೇ. ತಾರ್ಕಿಕರು ಅನುಮಾನಪ್ರಮಾಣದಿಂದಲೇ ಈಶ್ವರನ ಅಸ್ತಿತ್ವವನ್ನು ಸಾಧಿಸುತ್ತಾರೆ.

ಲೋಕದಲ್ಲಿ ಪ್ರತಿಯೊಂದು ಕಾರ್ಯಕ್ಕೂ ಒಬ್ಬ ಕರ್ತೃವಿರುವುದು ಕಂಡು ಬರುತ್ತದೆ; ಘಟಕ್ಕೆ ಕುಂಭಕಾರನಿರುವಂತೆ. ಅದೇ ಪ್ರಕಾರ ಈ ಪ್ರಪಂಚವೆಂಬ ಕಾರ್ಯಕ್ಕೆ ಒಬ್ಬ ಕರ್ತಾ ಇರಲೇಬೇಕು. ಆ ಕರ್ತೃವೇ ಈಶ್ವರ. ಈ ಅನುಮಾನ ಹೀಗಿದೆ— क्षित्यङ्कुरादिकं कर्तृजन्यम्, कार्यत्वात्, घटवत्। ಹೀಗೆ ಸಿದ್ಧನಾದ ಪರಮಾತ್ಮನಲ್ಲಿ ಸರ್ವಜ್ಞತ್ವವು ಸಕಲಪರಮಾಣುಗಳ ಸೂಕ್ಷ್ಮದರ್ಶಿತ್ವದಿಂದ ಸಿದ್ಧವಾಗುತ್ತದೆ.

ಜೀವಾತ್ಮ ಕೂಡ ಪ್ರತ್ಯಕ್ಷನಲ್ಲದುದರಿಂದ ಅನುಮಾನದಿಂದಲೇ ಜ್ಞೇಯವಾಗಿರುತ್ತಾನೆ. ವಿಷಯಗಳನ್ನು ಅರಿಯುವುದಕ್ಕೆ ಇಂದ್ರಿಯಗಳನ್ನು ಸಾಧನವಾಗಿ ಉಪಯೋಗಿಸುವ ಒಬ್ಬ ಕರ್ತಾ ಇರಲೇಬೇಕು. ಪ್ರತಿಯೊಂದು ಸಾಧನಕ್ಕೆ (ಕರಣ) ಅದನ್ನು ಉಪಯೋಗಿಸುವ ಒಬ್ಬ ಕರ್ತೃವಿನ ಆವಶ್ಯಕತೆ ಇದೆ. ನಮ್ಮ ಇಂದ್ರಿಯಗಳೆಲ್ಲವೂ ಸಾಧನಗಳು (ಕರಣಗಳು). ಆದ್ದರಿಂದ ಅವುಗಳನ್ನು ಉಪಯೋಗಿಸುವ ಕರ್ತೃವಾಗಿ ಆತ್ಮಾ ಸಿದ್ಧವಾಗುತ್ತಾನೆ. ಈ ಅನುಮಾನದ ಮೂಲಸ್ವರೂಪ ಹೀಗಿದೆ: करणव्यापारः सकर्तृकः, करणव्यापारत्वात्, छिदिक्रियायां वास्यादिव्यापारवत्।

ಪ್ರತಿಯೊಂದು ಪ್ರಾಣಿಯಲ್ಲಿಯೂ ಸುಖ-ದುಃಖಗಳ ಅನುಭವ ವಿಭಿನ್ನವಾಗಿರುವುದರಿಂದ ಅನುಭವಿಸುವ ಆತ್ಮನೂ ಭಿನ್ನ ಎಂದು ತಾರ್ಕಿಕರು ವಾದಿಸುತ್ತಾರೆ. ಜೊತೆಗೆ ಬುದ್ಧಿ, ಸುಖ, ದುಃಖ, ಇಚ್ಛಾ, ದ್ವೇಷ, ಪ್ರಯತ್ನ, ಧರ್ಮ ಮತ್ತು ಅಧರ್ಮಗಳೆಂಬ ಗುಣಗಳಿಗೆ ಆಶ್ರಯವಾಗಿ ಅಂಗೀಕೃತ ನವದ್ರವ್ಯಗಳಲ್ಲಿ ಆತ್ಮನನ್ನು ಹೊರತುಪಡಿಸಿ ಉಳಿದ ಯಾವ ದ್ರವ್ಯವೂ ಆಶ್ರಯವಾಗಲಾರದು.

'ನಾನು ಸುಖಿ' 'ನಾನು ದುಃಖಿ' ಎಂಬ ಮಾನಸಪ್ರತ್ಯಕ್ಷವಿಷಯತ್ವದಿಂದ ಜೀವಾತ್ಮನು ಮಾನಸಪ್ರತ್ಯಕ್ಷನೆಂದು ನೈಯಾಯಿಕರು ಭಾವಿಸುತ್ತಾರೆ. ಆದರೆ ವೈಶೇಷಿಕರ ಪ್ರಕಾರ ಜೀವಾತ್ಮ ಮಾನಸಪ್ರತ್ಯಕ್ಷನಲ್ಲ. 'ನಾನು ಸುಖಿ' ಎಂಬಲ್ಲಿ ಪ್ರತ್ಯಕ್ಷವಾದುದು 'ನನ್ನ ಸುಖ'ವೇ ಹೊರತು 'ನಾನು' ಅಲ್ಲ. ಅವರ ಪ್ರಕಾರ ಜೀವಾತ್ಮನು ಪ್ರಾಣ, ಅಪಾನ, ನಿಮೇಷ, ಉನ್ಮೇಷ, ಜೀವನ, ಮನೋಗತಿ, ಇಂದ್ರಿಯಾಂತರವಿಕಾರಗಳು, ಸುಖ, ದುಃಖ, ಇಚ್ಛಾ, ದ್ವೇಷ ಮತ್ತು ಪ್ರಯತ್ನಗಳೆಂಬ ಲಿಂಗಗಳಿಂದ ಅನುಮೇಯವಾಗಿರುತ್ತಾನೆ.

ತಾರ್ಕಿಕರಂತೆ ಸಾಂಖ್ಯರೂ ಪಾತಂಜಲರೂ ಅದ್ವೈತವೇದಾಂತಿಗಳೂ ಜೀವಾತ್ಮವನ್ನು ವಿಭುವೆಂದು ಅಂಗೀಕರಿಸುತ್ತಾರೆ. ರಾಮಾನುಜ ಮತ್ತು ಮಧ್ವಮತಾನುಯಾಯಿಗಳು ಜೀವಾತ್ಮವು ಪರಮಾಣುಪರಿಮಾಣವನ್ನು ಹೊಂದಿದೆ ಎಂದು ಅಂಗೀಕರಿಸುತ್ತಾರೆ. ಮಾಧ್ಯಮಿಕಬೌದ್ಧರು ಆತ್ಮವು ಮಧ್ಯಮಪರಮಾಣುರೂಪಿ ಎಂದೂ ಜೈನರು ದೇಹಪರಮಾಣುರೂಪಿ ಎಂದೂ ವಾದಿಸುತ್ತಾರೆ. ಭೌತಿಕವಾದಿಗಳು (ಚಾರ್ವಾಕರು) ದೇಹವೇ ಆತ್ಮವೆನ್ನುತ್ತಾರೆ.

16. ಮನಸ್ ಎಂಬುದನ್ನು मनुते अनेन इति ಎಂದು ನಿರ್ವಚನ ಮಾಡಿದರೂ ಅದರ ವ್ಯಾಪ್ತಿ ಕೇವಲ ಮನನಕ್ಕೆ ಮಾತ್ರ ಸೀಮಿತವಾಗಿಲ್ಲ. ಲಕ್ಷಣದಲ್ಲಿ इन्द्रियं मन: ಎಂದಿಷ್ಟೇ ಹೇಳಿದರೆ ಚಕ್ಷುರಾದಿ ಇಂದ್ರಿಯಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಇನ್ನು सुखाद्युपलब्धिसाधनं मन: ಎಂದರೆ ಆತ್ಮಮನಃ-ಸಂಯೋಗವೂ ಸುಖಾದಿಗಳ ಸಾಕ್ಷಾತ್ಕಾರಸಾಧನವಾಗಿರುವುದರಿಂದ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ सुखदु:खादिसाक्षात्कारकारणत्वे सति इन्द्रियत्वम् ಎನ್ನಲಾಗಿದೆ. ದೀಪಿಕೆಯಲ್ಲಿ स्पर्शरहितत्वे सति क्रियावत्त्वम् ಎಂದು ಮನಸ್ಸಿನ ಇನ್ನೊಂದು ಲಕ್ಷಣವನ್ನು ಕೊಡಲಾಗಿದೆ.

ವಿಭುವಾದ ಆತ್ಮನು ಸರ್ವಬಾಹ್ಯೇಂದ್ರಿಯಗಳು ಮತ್ತು ವಿಷಯಗಳ ಜೊತೆ ಸದಾ ಸಂಪರ್ಕವನ್ನು ಹೊಂದಿದ್ದರೂ ಅವನು ಜ್ಞಾನಕ್ಕೆ ಅಧಿಕರಣಮಾತ್ರನಾದುದರಿಂದ ವಿಷಯಗಳ ಜ್ಞಾನವನ್ನು ಇಂದ್ರಿಯಗಳ ದ್ವಾರಾ ಆತ್ಮನಿಗೆ ಸಂದೇಶಿಸುವ ಒಂದು ಸಂಪರ್ಕಮಾಧ್ಯಮವಾಗಿ ಮನಸ್ಸನ್ನು ಕಲ್ಪಿಸಲಾಗಿದೆ. ಒಂದು ವೇಳೆ ಮನಸ್ ಎಂಬ ಇಂದ್ರಿಯವೇ ಇಲ್ಲದಿದ್ದರೆ ಸರ್ವ-ಜ್ಞಾನೇಂದ್ರಿಯಗಳ ಜೊತೆ ಸದಾ ಸಂಯುಕ್ತವಾಗಿರುವ ಆತ್ಮನಲ್ಲಿ ವಿಭಿನ್ನಾನುಭವಗಳು ಏಕಕಾಲದಲ್ಲಿ ಪ್ರತೀತವಾಗುತ್ತಿದ್ದವು. ಆದರೆ ಒಂದು ಸಲ ಒಂದು ಅನುಭವ ಮಾತ್ರ ಪ್ರತೀತವಾಗುತ್ತದೆ. ಇಂದ್ರಿಯಗಳು ಏಕಕಾಲದಲ್ಲಿ ಅನೇಕ ವಿಷಯಗಳ ಜೊತೆ ಸಂಬಂಧಿಸಿರುತ್ತವೆ. ಇವುಗಳಲ್ಲಿ ಒಂದೇ ವಿಷಯದ ಜ್ಞಾನವು ತತ್ಸಂಬಂಧಿ ಇಂದ್ರಿಯದ್ವಾರಾ ಆತ್ಮನಿಗೆ ಉಂಟಾಗುವಂತೆ ಮಾಡುವ ಸಾಧನ-ವಾಗಿ ಮನಸ್ಸು ಕಾರ್ಯ ನಿರ್ವಹಿಸುತ್ತದೆ. ಇದನ್ನೇ युगपत् ज्ञानानुत्पत्ति: मनस: लिङ्गम् ಎನ್ನಲಾಗಿದೆ.

ಮನಸ್ ನಿತ್ಯವಾಗಿದ್ದು ಅವಯವರಹಿತವಾಗಿರುತ್ತದೆ. ಆತ್ಮಗಳು ಅನೇಕವಾಗಿರುವುದರಿಂದ ಅವುಗಳಿಗೆ ಜ್ಞಾನಸಾಧನವಾದ ಮನಸ್ಸೂ ಅನಂತ. ನಿತ್ಯವಾಗಿರುವುದೆಲ್ಲ ಒಂದೋ ವಿಭು-ವಾಗಿರಬೇಕು ಅಥವಾ ಅಣುಪರಿಮಾಣವನ್ನು ಹೊಂದಿರಬೇಕು. ಮನಸ್ ನಿತ್ಯವಾಗಿದ್ದು ವಿಭುವಲ್ಲ-ವಾದ್ದರಿಂದ ಅಣುಪರಿಮಾಣವನ್ನು ಹೊಂದಿದೆ. ಎರಡು ವಿಭುದ್ರವ್ಯಗಳ ನಡುವೆ ಸಂಯೋಗ ವಿಯೋಗಗಳು ಘಟಿಸುವುದಿಲ್ಲವಾದ್ದರಿಂದ ವಿಭುವಾದ ಆತ್ಮದೊಂದಿಗೆ ಸಂಯೋಗವನ್ನು

ಹೊಂದುವ ಮನಸ್ಸು ವಿಭುವಾಗಿರಲು ಸಾಧ್ಯವಿಲ್ಲ. ಮನಸ್ ಅಂತರಿಂದ್ರಿಯವಾಗಿದ್ದು ಅನುಮೇಯ-ವಾಗಿರುತ್ತದೆ.

ಮೀಮಾಂಸಕರು ಮನಸ್ಸನ್ನು ವಿಭು ಎಂದು ಅಂಗೀಕರಿಸುತ್ತಾರೆ. ವೇದಾಂತಿಗಳು ಮನಸ್ಸನ್ನು 'ಅಂತಃಕರಣ' ಎಂಬ ನಾಮಾಂತರದಿಂದ ಕರೆದು ಅದನ್ನು सङ्कल्पविकल्पात्मकवृत्तिमत् ಎಂದು ಲಕ್ಷಿಸುತ್ತಾರೆ.

17. ರೂಪಲಕ್ಷಣದಲ್ಲಿ ಚಕ್ಷುರ್ಮಾತ್ರಗ್ರಾಹ್ಯತ್ವ, ಗುಣತ್ವ ಮತ್ತು ಚಕ್ಷುರ್ಗ್ರಾಹ್ಯತ್ವ ಎಂದು ಮೂರು ದಳಗಳಿವೆ. ಮೊದಲನೆಯ ದಳವನ್ನು ಮಾತ್ರ ಹೇಳಿದರೆ येनेन्द्रियेण... ಎಂಬ ನಿಯಮದ ಪ್ರಕಾರ ರೂಪತ್ವ ಮತ್ತು ರೂಪಾಭಾವಗಳೂ ಚಕ್ಷುರ್ಮಾತ್ರಗ್ರಾಹ್ಯವಾದುದರಿಂದ ಅವುಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಎರಡನೆಯ ದಳವಾದ ಗುಣತ್ವ ಎಂದಷ್ಟೇ ಹೇಳಿದರೆ ರಸಾದಿಗಳೂ ಗುಣಗಳಾಗಿರುವುದರಿಂದ ಅವುಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. 'ಮಾತ್ರ' ಎಂಬ ಪದವನ್ನು ಪ್ರಯೋಗಿಸದೇ ಚಕ್ಷುರ್ಗ್ರಾಹ್ಯತ್ವ ಎಂದರೆ ಏಕತ್ವಾದಿಸಂಖ್ಯೆಗಳು ಚಕ್ಷುವಿನಿಂದಲೂ ಗ್ರಾಹ್ಯವಾಗುವುದರಿಂದ ಅವುಗಳಲ್ಲಿ ಅತಿವ್ಯಾಪ್ತಿ ಬರುತ್ತದೆ. ಗ್ರಂಥದಲ್ಲಿಯ ಲಕ್ಷಣವು ಎಲ್ಲ ಅತಿವ್ಯಾಪ್ತಿಗಳನ್ನು ನಿವಾರಿಸುತ್ತದೆ.

ಶುಕ್ಲದಿಂದಾರಂಭಿಸಿ ಕಪಿಶದವರೆಗಿನ ಆರು ವರ್ಣಗಳ ಮಿಶ್ರಣವೇ ಏಳನೆಯದಾದ 'ಚಿತ್ರ' ಎಂಬ ಭೇದವಾಗುವುದರಿಂದ ಅದನ್ನು ಒಂದು ಪ್ರತ್ಯೇಕಪ್ರಭೇದವನ್ನಾಗಿ ಅಂಗೀಕರಿಸಿದುದರ ಔಚಿತ್ಯವೇನು ಎಂಬುದಕ್ಕೆ ತಾರ್ಕಿಕರ ಪರಿಹಾರ ಹೀಗಿದೆ—ಚಿತ್ರವೆಂಬುದು ರೂಪಪ್ರಭೇದಗಳ ಮಿಶ್ರಣವೆಂಬುದು ಯುಕ್ತವಾದರೂ ಅನೇಕವರ್ಣಗಳಿಂದ ಕೂಡಿದ ವಸ್ತುವೊಂದರ ಪೂರ್ಣಕಲ್ಪನೆ ಆ ವಸ್ತುವಿನ ಒಂದು ವರ್ಣವನ್ನು ಮಾತ್ರ ಗ್ರಹಿಸುವುದರಿಂದ ಸಾಧ್ಯವಿಲ್ಲ. ಆದ್ದರಿಂದ ಚಿತ್ರಭೇದವನ್ನು ಅಂಗೀಕರಿಸದಿದ್ದರೆ ವಸ್ತುವಿನ ಪ್ರತ್ಯೇಕ ಅವಯವದ ಜ್ಞಾನ ಮಾತ್ರ ಸಾಧ್ಯವೇ ಹೊರತು ಅದರ ಸಮಗ್ರಜ್ಞಾನ ಉಂಟಾಗಲಾರದು.

ರೂಪವು ಚಾಕ್ಷುಷಪ್ರತ್ಯಕ್ಷವಾಗಬೇಕಾದರೆ ಮಹತ್‌ಪರಿಮಾಣ, ಉದ್ಭೂತತ್ವ, ಅನಭಿಭೂತತ್ವ ಮತ್ತು ರೂಪತ್ವ ಎಂಬ ನಾಲ್ಕು ಅಂಶಗಳು ಆವಶ್ಯಕವಾಗಿರುತ್ತವೆ. ಮಹತ್‌ಪರಿಮಾಣ-ವಿಲ್ಲದ್ದರಿಂದಲೇ ಪರಮಾಣುಗತರೂಪವು ಚಾಕ್ಷುಷಪ್ರತ್ಯಕ್ಷವಾಗುವುದಿಲ್ಲ. ನಯನಗೋಚರತ್ವವೇ ಉದ್ಭೂತತ್ವ. ಅನಭಿಭೂತತ್ವವೆಂದರೆ ಪ್ರತಿಬಂಧಕರಾಹಿತ್ಯ. ಪಾರ್ಥಿವರೂಪವು ಪ್ರತಿಬಂಧಕವಾಗಿ ಅಗ್ನಿಯಲ್ಲಿಯ ಭಾಸ್ವರಶುಕ್ಲತ್ವವು ಗೋಚರವಾಗುವುದಿಲ್ಲ.

ಆಧುನಿಕವಿಜ್ಞಾನವು ತಾರ್ಕಿಕದರ್ಶನದಂತೆ ಸಪ್ತವರ್ಣಗಳನ್ನು ಅಂಗೀಕರಿಸಿದರೂ ಕಪ್ಪು(ನೀಲ) ಮತ್ತು ಶುಕ್ಲ(ಬಿಳಿ) ಇವುಗಳ ಪ್ರತ್ಯೇಕ ಅಸ್ತಿತ್ವವನ್ನು ನಿರಾಕರಿಸುತ್ತದೆ. ಏಕೆಂದರೆ ವಿಜ್ಞಾನದ ಪ್ರಕಾರ ವಸ್ತುಗಳು ತಮ್ಮ ಮೇಲೆ ಬಿದ್ದ ಪ್ರಕಾಶದಲ್ಲಿಯ ವರ್ಣಗಳನ್ನು ಹೀರಿಕೊಳ್ಳುತ್ತವೆ. ತನ್ನ ಸ್ವಭಾವಧರ್ಮಕ್ಕನುಗುಣವಾಗಿ ವಸ್ತುವು ಯಾವ ವರ್ಣವನ್ನು ಹೀರಲಾರದೇ ಪ್ರತಿಫಲಿಸುವುದೋ ಆ ವರ್ಣವೇ ಆ ವಸ್ತುವಿನ ಬಣ್ಣವಾಗಿರುತ್ತದೆ. ಕಪ್ಪು ಎಂದರೆ ಎಲ್ಲ ವರ್ಣಗಳನ್ನು ಹೀರಿಕೊಂಡಿದ್ದು ಮತ್ತು ಬಿಳಿ ಎಂದರೆ ಎಲ್ಲ ವರ್ಣಗಳನ್ನು ಏಕಕಾಲದಲ್ಲಿ ಪ್ರತಿಫಲಿಸುವುದು. ತಾರ್ಕಿಕರು ಅಭಾಸ್ವರಶುಕ್ಲತ್ವ

ಜಲದ ವರ್ಣ ಎಂದರೂ ವಿಜ್ಞಾನದ ಪ್ರಕಾರ ಜಲಕ್ಕೆ ಉಪಾಧಿಮೂಲವಾದ ವರ್ಣವಿದೆಯೇ ಹೊರತು ಸ್ವಕೀಯವಾದ ವರ್ಣವಿಲ್ಲ.

ವ್ಯವಹಾರದಲ್ಲಿ ರೂಪವೆಂಬ ಪದವು 'ಆಕಾರ' ಎಂಬ ಅರ್ಥವನ್ನು ಒಳಗೊಂಡಿದ್ದರೂ ರೂಪ ಮತ್ತು ಆಕಾರಗಳ ನಡುವೆ ವ್ಯತ್ಯಾಸವಿದೆ. ಆಕಾರವು ಸಪ್ತವರ್ಣಗಳಲ್ಲಿ ಸೇರದಿರುವುದರಿಂದ ಯಾವುದನ್ನು ನಾವು ಆಕಾರವೆನ್ನುತ್ತೇವೆಯೋ ಅದು ರೂಪವಾಗಲಾರದು. ನೈಯಾಯಿಕರು ಆಕಾರವನ್ನು 'ಅವಯವಸಂಸ್ಥಾನವಿಶೇಷ' ಎಂದು ಪರಿಗಣಿಸುತ್ತಾರೆ. ಎಂದರೆ 'ಒಂದು ವಿಧವಾದ ವ್ಯವಸ್ಥೆಯಲ್ಲಿ ಅವಯವಗಳು ಕೂಡಿಕೊಂಡಿರುವಿಕೆ' ಎಂದರ್ಥ. ಆದ್ದರಿಂದ ಆಕಾರವು ಸಂಯೋಗವೆಂಬ ಗುಣದಲ್ಲಿ ಅಂತರ್ಗತವಾಗುವಂತೆ ತೋರುತ್ತದೆ.

**18.** रस्यते आस्वाद्यते इति रस: ಎಂದು ರಸದ ನಿಷ್ಪತ್ತಿಯಿದೆ. ಲಕ್ಷಣದಲ್ಲಿ ರಸನಮಾತ್ರಗ್ರಾಹ್ಯ ಎಂದು ಪ್ರಯೋಗವಿಲ್ಲ. ಏಕೆಂದರೆ ರಸನೇಂದ್ರಿಯವು ರಸವೊಂದನ್ನೇ ಗ್ರಹಿಸುತ್ತದೆ. ಇನ್ನು ಲಕ್ಷಣದಲ್ಲಿ 'ಗುಣ'ಪದಪ್ರಯೋಗವಿಲ್ಲದಿದ್ದರೆ येनेन्द्रियेण.... ನಿಯಮದಿಂದ ರಸತ್ವ, ರಸಾಭಾವಗಳಲ್ಲಿ ಅತಿವ್ಯಾಪ್ತಿ ಬರುತ್ತದೆ.

ಪೃಥಿವಿಯಲ್ಲಿ ಷಡ್ರಸಗಳಿದ್ದರೂ ದ್ರವದ ಸಹಯೋಗವಿಲ್ಲದಿದ್ದರೆ ರಸಜ್ಞಾನವೇ ಸಾಧ್ಯ-ವಾಗುವುದಿಲ್ಲ. ಜಲದಲ್ಲಿ ಮಧುರರಸವನ್ನು ಅಂಗೀಕರಿಸಿದ್ದರೂ ಅದು ಪೃಥಿವಿಯ ಸಂಪರ್ಕ-ದಿಂದ ಉಂಟಾದುದೇ ಹೊರತು ಜಲಕ್ಕೆ ಸ್ವಕೀಯವಾದ ರಸವಿಲ್ಲ ಎಂಬುದು ಆಧುನಿಕ ವಿಜ್ಞಾನದ ಅಭಿಮತ.

ರೂಪದಲ್ಲಿಯಂತೆ ರಸದಲ್ಲಿ 'ಚಿತ್ರ'ಭೇದದ ಕಲ್ಪನೆಯಿಲ್ಲ. ಏಕೆಂದರೆ ತಾರ್ಕಿಕರ ಪ್ರಕಾರ ವಸ್ತುವೊಂದು ಅನೇಕರಸಗಳನ್ನು ಹೊಂದಿರುವ ಸಾಧ್ಯತೆಯಿದ್ದರೂ ಅವುಗಳನ್ನು ಏಕಕಾಲದಲ್ಲಿ ಗ್ರಹಿಸುವ ಸಾಮರ್ಥ್ಯ ರಸನೆಗೆ ಇಲ್ಲ.

**19.** ಗಂಧಲಕ್ಷಣದಲ್ಲಿಯೂ 'ಮಾತ್ರ' ಪದಪ್ರಯೋಗವಿಲ್ಲ. ಏಕೆಂದರೆ ಘ್ರಾಣೇಂದ್ರಿಯದಿಂದ ಗಂಧವನ್ನು ಬಿಟ್ಟು ಇತರ ಯಾವ ಗುಣವನ್ನೂ ಗ್ರಹಿಸಲಾಗುವುದಿಲ್ಲ. ಗಂಧತ್ವ, ಗಂಧಾಭಾವದಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ ಲಕ್ಷಣದಲ್ಲಿ 'ಗುಣ' ಎಂಬ ಪದಪ್ರಯೋಗವಿದೆ.

ಏಕಕಾಲದಲ್ಲಿ ಸುರಭಿ ಮತ್ತು ಅಸುರಭಿಗಳನ್ನು ಗ್ರಹಿಸುವುದು ಅಸಾಧ್ಯವಾದುದರಿಂದ ಚಿತ್ರಗಂಧವನ್ನು ಕಲ್ಪಿಸಲಾಗಿಲ್ಲ. ಗಂಧದಲ್ಲಿಯ ಉಕ್ತಭೇದದ್ವಯ ವ್ಯಕ್ತಿನಿಷ್ಠವಾದುದು.

**20.** ತ್ವಕ್‌ಲಕ್ಷಣದಲ್ಲಿ ತ್ವಗಿಂದ್ರಿಯಗ್ರಾಹ್ಯತ್ವ, ಮಾತ್ರತ್ವ ಮತ್ತು ಗುಣತ್ವ ಎಂಬ ದಳತ್ರಯವಿದೆ. ರಸಾದಿಗಳಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ ತ್ವಗಿಂದ್ರಿಯಗ್ರಾಹ್ಯ ಎನ್ನಲಾಗಿದೆ. ಸಂಖ್ಯಾ, ಸಂಯೋಗಾದಿ-ಗಳಲ್ಲಿ ಅತಿವ್ಯಾಪ್ತಿನಿವಾರಣೆಗೆ ಮಾತ್ರ ಪದಪ್ರಯೋಗವಿದೆ. ಏಕೆಂದರೆ ಸಂಖ್ಯಾ, ಸಂಯೋಗಾದಿಗಳು ತ್ವಗಿಂದ್ರಿಯಮಾತ್ರಗ್ರಾಹ್ಯವಾಗಿರದೇ ಚಕ್ಷುರಿಂದ್ರಿಯಗ್ರಾಹ್ಯವೂ ಆಗಿವೆ. ಇನ್ನು ಸ್ಪರ್ಶತ್ವ ಸ್ಪರ್ಶಾಭಾವಗಳಲ್ಲಿ ಅತಿವ್ಯಾಪ್ತಿವಾರಣೆಗೆ 'ಗುಣ' ಎಂಬ ಪದಪ್ರಯೋಗವಿದೆ.

21. ಜಲ, ತೇಜಸ್, ವಾಯು ಇವುಗಳಲ್ಲಿ ಪ್ರತಿಯೊಂದರ ಪರಮಾಣುಗಳಲ್ಲಿಯೂ ರೂಪ, ರಸ, ಗಂಧ, ಸ್ಪರ್ಶಗಳೆಂಬ ನಾಲ್ಕೂ ಗುಣಗಳಿರುವುದಿಲ್ಲ. ಜಲದಲ್ಲಿ ಗಂಧವಿಲ್ಲ; ತೇಜಸ್‌ನಲ್ಲಿ ಗಂಧ, ರಸಗಳಿಲ್ಲ; ವಾಯುವಿನಲ್ಲಿ ರೂಪ, ರಸ, ಗಂಧಗಳಿಲ್ಲ. ಈ ಮೂರು ದ್ರವ್ಯಗಳ ಪರಮಾಣುಗಳಲ್ಲಿ ಯಾವ ಯಾವ ಗುಣಗಳಿರುವವೋ ಅವು ನಿತ್ಯವಾಗಿರುತ್ತವೆ. ಆದರೆ ಪೃಥಿವಿಯ ಪರಮಾಣುಗಳಲ್ಲಿ ಮಾತ್ರ ಪಾಕಜನ್ಯವಾದುದರಿಂದ ಅನಿತ್ಯವಾಗಿರುತ್ತವೆ. रूपादिपरावृत्तिजनक: विजातीयतेज:संयोग: पाक: । ಎಂದರೆ ರೂಪ, ರಸ, ಗಂಧ, ಸ್ಪರ್ಶಗಳನ್ನು ಬದಲಾಯಿಸುವ ವಿಜಾತೀಯತೇಜಸ್ಸಿನ ಸಂಯೋಗವೇ ಪಾಕ. ತೈಜಸವಿಷಯವಾದ ಸುವರ್ಣಾದಿಗಳಲ್ಲಿ ರೂಪಾದಿಗಳನ್ನು ಬದಲಾಯಿಸುವ ತೇಜಃಸಂಯೋಗವು ಸಜಾತೀಯವಾಗಿರುತ್ತದೆ. ಅದನ್ನು ವ್ಯಾವರ್ತನಗೊಳಿಸುವುದಕ್ಕಾಗಿ ವಿಜಾತೀಯ ಎಂಬ ಪದಪ್ರಯೋಗವಿದೆ.

ರೂಪಾದಿಚತುಷ್ಟಯದಲ್ಲಿ ಉದ್ಭೂತ ಮತ್ತು ಅನುದ್ಭೂತ ಎಂದು ಎರಡು ವಿಧಗಳಿವೆ. ಪ್ರತ್ಯಕ್ಷಗ್ರಹಣೆಗೆ ಸಹಕಾರಿಯಾದ ಧರ್ಮವನ್ನು ಉದ್ಭೂತ ಎನ್ನುತ್ತಾರೆ. ಅನುದ್ಭೂತತ್ವವು ಸುಪ್ತಧರ್ಮವಾಗಿರುವುದು.

ಪೃಥಿವಿಯಲ್ಲಿಯ ರೂಪಾದಿಗಳು ಅನಿತ್ಯವೆಂಬುದನ್ನು ಉದಾಹರಣೆಯೊಂದರಿಂದ ಸಮರ್ಥಿಸಬಹುದು. ಮಾವಿನಕಾಯಿಯಲ್ಲಿಯ ರೂಪರಸಗಂಧಸ್ಪರ್ಶಗಳು ತೇಜಃಸಂಯೋಗದಿಂದ ಪಕ್ವಗೊಂಡು ಮೊದಲಿಗಿಂತ ಭಿನ್ನವಾದ ರೂಪರಸಗಂಧಸ್ಪರ್ಶಗಳನ್ನು ಹೊಂದುತ್ತವೆ. ಹೀಗೆ ಚತುರ್ವಿಧವಾದ ಕಾರ್ಯಗಳಲ್ಲಿ ವಿಲಕ್ಷಣತೆಯಿಂದ ಇವುಗಳ ಕಾರಣವಾದ ತೇಜಃಸಂಯೋಗ-ದಲ್ಲಿಯೂ ಭಿನ್ನತೆಯನ್ನು ಕಲ್ಪಿಸಲಾಗಿದೆ.

ಸ್ಥೂಲವಸ್ತುವಿನಲ್ಲಿಯ ರೂಪಾದಿಗಳ ಪರಿವರ್ತನೆಗೆ ಕಾರಣವಾದ ಪಾಕದ ಕಾರ್ಯವಿಧಾನವನ್ನು ಕುರಿತು ಎರಡು ವಾದಗಳಿವೆ:

ಪೀಲುಪಾಕವಾದ—ಈ ವಾದದ ಪ್ರತಿಪಾದಕರು ವೈಶೇಷಿಕರು. 'ಪೀಲು' ಎಂದರೆ ಪರಮಾಣು. ಸ್ಥೂಲವಸ್ತುವಿನಲ್ಲಿಯ ರೂಪಾದಿಪರಿವರ್ತನೆಗೆ ಅವುಗಳ ಪರಮಾಣುಗಳಲ್ಲಿಯೇ ತೇಜಃಸಂಯೋಗದಿಂದ ಉಂಟಾದ ರೂಪಾದಿಪರಿವರ್ತನೆ ಕಾರಣವೆಂದು ಪೀಲುಪಾಕವಾದಿಗಳ ಮತವಾಗಿದೆ. ಉದಾಹರಣೆಗೆ, ತೇಜಃಸಂಯೋಗದ ಪೂರ್ವದಲ್ಲಿ ಘಟವೊಂದು ಶ್ಯಾಮ-ವರ್ಣದ್ದಾಗಿರುತ್ತದೆ. ಅದು ತೇಜಃಸಂಯುಕ್ತವಾಗಿ ರಕ್ತವರ್ಣವನ್ನು ಹೊಂದುತ್ತದೆ. ಈ ರೀತಿಯಾಗಿ ಒಂಬತ್ತು ಕ್ಷಣಗಳಲ್ಲಿ ಘಟವೊಂದು ಪರಿವರ್ತನೆಗೊಳ್ಳುವ ಕ್ರಮ ವೈಶೇಷಿಕರ ಪ್ರಕಾರ ಹೀಗಿದೆ: (1) ಅಗ್ನಿಸಂಯೋಗದಿಂದ ಪರಮಾಣುಗಳಲ್ಲಿ ಕ್ರಿಯೆ, ಪರಮಾಣುಗಳಲ್ಲಿ ವಿಭಾಗ, ಆರಂಭಿಕ ಸಂಯೋಗನಾಶ, ದ್ವ್ಯಣುಕನಾಶ (2) ಪರಮಾಣುಗಳಲ್ಲಿ ಶ್ಯಾಮಾದಿನಾಶ (3) ಪರಮಾಣುಗಳಲ್ಲಿ ರಕ್ತವರ್ಣೋತ್ಪತ್ತಿ (4) ದ್ರವ್ಯಾರಂಭ ಅನುಗುಣಕ್ರಿಯೆ (5) ವಿಭಾಗ (6) ಪೂರ್ವಸಂಯೋಗನಾಶ (7) ಆರಂಭಿಕಸಂಯೋಗ (8) ದ್ವ್ಯಣುಕೋತ್ಪತ್ತಿ (9) ಘಟಾದ್ಯುತ್ಪತ್ತಿ. ವೈಶೇಷಿಕರ ಈ ವಾದವನ್ನು ಟೀಕಿಸುತ್ತ ನೈಯಾಯಿಕರು ತಮ್ಮದೇ ಆದ ವಿಭಿನ್ನವಾದವನ್ನು ಮಂಡಿಸುತ್ತಾರೆ.

ಪಿಠರಪಾಕವಾದ—ನೈಯಾಯಿಕರು ಪೀಲುಪಾಕವಾದವನ್ನು ಹೀಗೆ ಖಂಡಿಸುತ್ತಾರೆ— (1) ಮೊದಲಿದ್ದ ಘಟವು ಪರಮಾಣುಗಳವರೆಗೆ ವಿಭಜನೆಗೊಂಡು ಹೊಸದಾಗಿ

ಉತ್ಪನ್ನವಾಗುವುದಾದರೆ ಪೂರ್ವಘಟವೇ ಇದು ಎಂಬ ಜ್ಞಾನವು ಬರುವುದಿಲ್ಲ. ಆದರೆ ಅನುಭವ ಇದಕ್ಕೆ ವಿರುದ್ಧವಾಗಿದೆ. (2) ಕುಲುಮೆಯಲ್ಲಿ ಅನೇಕ ಘಟಗಳನ್ನು ಬೇಯಿಸಲು ಇಟ್ಟಾಗ ತಳದಲ್ಲಿರುವ ಘಟ ಪರಮಾಣುಗಳವರೆಗೆ ನಾಶವಾದರೆ ಅದನ್ನು ಆಧರಿಸಿರುವ ಮೇಲಿನ ಘಟಗಳು ಪತನಹೊಂದಬೇಕಾಗುತ್ತದೆ. (3) ಘಟದಲ್ಲಿ ಚಿತ್ರಿಸಿದ ಚಿತ್ರಗಳು ಅಗ್ನಿಸಂಯೋಗದ ಬಳಿಕವೂ ಪೂರ್ವಸ್ಥಿತಿಯಲ್ಲಿರುವುದನ್ನು ಗಮನಿಸುತ್ತೇವೆ. ಹೀಗೆ ವಾದಿಸುತ್ತ ನೈಯಾಯಿಕರು ಪಿಠರಪಾಕ ವಾದವನ್ನು ಸ್ಥಾಪಿಸುತ್ತಾರೆ.

ಪಿಠರವೆಂದರೆ अवयवावष्टब्धोऽवयवी ಎಂಬ ಪರಿಭಾಷೆಯಿದ್ದರೂ ಸಾಮಾನ್ಯವಾಗಿ 'ಹೊರಮೈ' ಎನ್ನಬಹುದು. ಇವರ ಪ್ರಕಾರ ಘಟದಲ್ಲಿ ಪರಮಾಣುವಿನವರೆಗೂ ಏಕಕಾಲದಲ್ಲಿ ರೂಪಾದಿ ಪರಿವರ್ತನೆಯಾಗುತ್ತದೆ ಹಾಗೂ ಪೂರ್ವಘಟ ನಾಶವಾಗದೇ ಅದರಲ್ಲಿ ರೂಪಾದಿಗಳು ಪರಿವರ್ತನೆಗೊಳ್ಳುತ್ತವೆ.

ವೈಶೇಷಿಕರು ಮತ್ತು ನೈಯಾಯಿಕರಲ್ಲಿ ಪೃಥಿವಿಯ ರೂಪಾದಿಗಳ ಪರಿವರ್ತನೆಯ ವಿಧಾನದಲ್ಲಿ ಮತಭೇದವಿದೆಯೇ ಹೊರತು ಪೃಥಿವಿಯ ರೂಪಾದಿಪರಿವರ್ತನೆಯು ಪಾಕಜವಾಗಿದ್ದು ಅನಿತ್ಯವಾಗಿರುತ್ತದೆ ಎನ್ನುವುದರಲ್ಲಿ ಏಕಾಭಿಪ್ರಾಯವಿದೆ.

22. ಸಂಖ್ಯೆಯ ಲಕ್ಷಣದಲ್ಲಿ ಕೇವಲ 'ವ್ಯವಹಾರಹೇತುಃ' ಎಂದಷ್ಟೇ ಪ್ರಯೋಗಿಸಿದರೆ ಘಟಾದಿಗಳೂ ವ್ಯವಹಾರಹೇತುಗಳಾಗಿರುವುದರಿಂದ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ 'ಏಕತ್ವಾದಿ' ಎಂಬ ಪದವಿದೆ. 'ಹೇತುಃ' ಎನ್ನುವುದಕ್ಕೆ ಅಸಾಧಾರಣಕಾರಣ ಎಂದರ್ಥ ಮಾಡಬೇಕು. ಇಲ್ಲದಿದ್ದರೆ ಸಾಧಾರಣ ಕಾರಣಗಳಲ್ಲಿ ಅತಿವ್ಯಾಪ್ತಿಯುಂಟಾಗುತ್ತದೆ. ಈಶ್ವರ, ಅವನ ಜ್ಞಾನ-ಯತ್ನ-ಇಚ್ಛೆಗಳು, ಕಾಲ, ಅದೃಷ್ಟ, ದಿಕ್, ಪ್ರಾಗಭಾವ ಮತ್ತು ಪ್ರತಿಬಂಧಕಾಭಾವ ಇವು ಕಾರ್ಯಸಾಮಾನ್ಯವನ್ನು ಕುರಿತು ಸಾಧಾರಣ ಕಾರಣಗಳು—

ईशस्तज्ज्ञानयत्नेच्छाकालोऽदृष्टं दिगेव च।
प्रागप्रतिबन्धकाभावौ कार्ये साधारणा मताः॥

ಏಕತ್ವವೆಂಬುದಕ್ಕೆ ಮಾತ್ರ ನಿರಪೇಕ್ಷವಾದ ಅಸ್ತಿತ್ವವಿದ್ದು ಉಳಿದೆಲ್ಲ ಸಂಖ್ಯೆಗಳು ಸಾಪೇಕ್ಷ ಅಸ್ತಿತ್ವವನ್ನು ಹೊಂದಿವೆ. ಆದ್ದರಿಂದಲೇ ದ್ವಿತ್ವಾದಿಸಂಖ್ಯೆಗಳನ್ನು ಅಪೇಕ್ಷಾಬುದ್ಧಿಜನ್ಯ ಎನ್ನುತ್ತಾರೆ. अनेकैकत्वबुद्धिर्या सापेक्षाबुद्धिरुच्यते। ಅನೇಕ ವಸ್ತುಗಳಿರುವಾಗ ಪ್ರತಿಯೊಂದನ್ನೂ ಪ್ರತ್ಯೇಕವಾಗಿ ಗ್ರಹಿಸಿ ಅವೆಲ್ಲವನ್ನೂ ಒಟ್ಟಾಗಿ ಗ್ರಹಿಸುವ ಜ್ಞಾನವೇ ಅಪೇಕ್ಷಾಬುದ್ಧಿ. ಇದರಿಂದ ಎರಡು, ಮೂರು ಇತ್ಯಾದಿ ಜ್ಞಾನವುಂಟಾಗುತ್ತದೆ. ಅಪೇಕ್ಷಾಬುದ್ಧಿಜನ್ಯವಾದುದರಿಂದಲೇ ದ್ವಿತ್ವಾದಿಗಳು ಅನಿತ್ಯಗಳು. ಸಂಖ್ಯೆಯು ಚಕ್ಷು ಮತ್ತು ತ್ವಗಿಂದ್ರಿಯಗಳಿಂದ ಗ್ರಾಹ್ಯವಾಗುವುದರಿಂದ ಸಾಮಾನ್ಯಗುಣವಾಗಿದೆ. ಮೀಮಾಂಸಕರು ಸಂಖ್ಯೆಯನ್ನು ಪ್ರತ್ಯೇಕಪದಾರ್ಥವನ್ನಾಗಿ ಅಂಗೀಕರಿಸುತ್ತಾರೆ.

23. ಮಾನವ್ಯವಹಾರವೆಂದರೆ हस्तवितस्त्यादिव्यवहारः ಅಥವಾ इदं महत् इदम् अणु

इत्याद्यात्मक: व्यवहार:। ಪರಿಮಾಣದ ಲಕ್ಷಣದಲ್ಲಿ ದಂಡಾದಿಗಳಲ್ಲಿ ಬರುವ ಅತಿವ್ಯಾಪ್ತಿ ನಿವಾರಣೆಗಾಗಿ 'ಮಾನ' ಎಂಬ ಶಬ್ದಪ್ರಯೋಗವಿದೆ. ಅಸಾಧಾರಣ ಎಂಬ ಪದವು ಕಾಲಾದಿಗಳಲ್ಲಿ ಅತಿವ್ಯಾಪ್ತಿಯನ್ನು ನಿವಾರಿಸುತ್ತದೆ. 'ಮಾನವ್ಯವಹಾರ' ಎಂಬ ಶಬ್ದದಲ್ಲಿಯ ಶಬ್ದತ್ವದಲ್ಲಿ ಉಂಟಾಗುವ ಅತಿವ್ಯಾಪ್ತಿನಿವಾರಣೆಗಾಗಿ 'ಕಾರಣ' ಎಂಬ ಪದಪ್ರಯೋಗವಿದೆ.

ಪರಿಮಾಣದ ಉಕ್ತಪ್ರಭೇದಗಳ ಜೊತೆ ಕೆಲವರು ಪಾರಿಮಾಂಡಲ್ಯ (ಪರಮಾಣುವಿನ ಪರಿಮಾಣ) ಮತ್ತು ವಿಭುತ್ವ (ಪರಮಮಹತ್) ಇವೆರಡನ್ನು ಅಂಗೀಕರಿಸುತ್ತಾರೆ. ಅಣು ಮತ್ತು ಮಹತ್ ಎಂಬ ಪರಿಮಾಣಪ್ರಭೇದಗಳು ಮೂರು ವಿಧವಾದ ಆಕಾರ(Dimension)ಗಳನ್ನು ಹೊಂದಿದ ವಸ್ತುಗಳ ಪರಿಮಾಣವನ್ನು ಸಂಕೇತಿಸಿದರೆ ಹ್ರಸ್ವ ಮತ್ತು ದೀರ್ಘ ಎಂಬ ಪ್ರಭೇದಗಳು ರೇಖೆ ಮುಂತಾದವುಗಳಲ್ಲಿರುವ ಒಂದು ಆಕಾರವನ್ನು ಮಾತ್ರ ಸಂಕೇತಿಸುತ್ತವೆ.

ಅನಿತ್ಯ ಪರಿಮಾಣವು ಸಂಖ್ಯಾಜನ್ಯ, ಪರಿಮಾಣಜನ್ಯ ಮತ್ತು ಪ್ರಚಯಜನ್ಯ ಎಂದು ತ್ರಿವಿಧ. ಎರಡು ಪರಮಾಣುಗಳನ್ನು ಹೊಂದಿದ ದ್ವ್ಯಣುಕದ ಪರಿಮಾಣ ಸಂಖ್ಯಾಜನ್ಯವಾದುದು. ಎರಡನೆಯದು ಕಪಾಲಪರಿಮಾಣಜನ್ಯವಾದ ಘಟದ ಪರಿಮಾಣ. ಅನೇಕಕಣಗಳ ಸಂಯೋಗದಿಂದ ಉಂಟಾದ ಮಣ್ಣಿನ ಮುದ್ದೆ ಮುಂತಾದವುಗಳ ಪರಿಮಾಣವು ಪ್ರಚಯಜನ್ಯವಾದುದು. ಸಾಂಖ್ಯರು ಮತ್ತು ವೇದಾಂತಿಗಳು ದೀರ್ಘತ್ವ ಮತ್ತು ಹ್ರಸ್ವತ್ವಗಳನ್ನು ಪ್ರತ್ಯೇಕಪರಿಮಾಣಗಳೆಂದು ಅಂಗೀಕರಿಸುವುದಿಲ್ಲ.

ಪೃಥಕ್ತ್ವದ ಲಕ್ಷಣದಲ್ಲಿ ದಂಡಾದಿಗಳಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ 'ಪೃಥಕ್' ಪದ-ಪ್ರಯೋಗವಿದೆ. ಕಾಲಾದಿಗಳಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ ಅಸಾಧಾರಣ ಎಂಬ ಪದವಿದೆ. 'ಕಾರಣ' ಎಂಬ ಪದವು 'ಪೃಥಕ್' ಎಂಬ ಶಬ್ದದಲ್ಲಿಯ ಶಬ್ದತ್ವದಲ್ಲಿ ಅತಿವ್ಯಾಪ್ತಿಯನ್ನು ನಿವಾರಿಸುತ್ತದೆ.

ಪೃಥಕ್ತ್ವದ ಲಕ್ಷಣವನ್ನು अपोद्धारव्यवहारकारणम् ಎಂದೂ ಅನ್ಯತ್ರ ಕೊಡಲಾಗಿದೆ. ಒಂದು ವಸ್ತುವನ್ನು ಉಳಿದ ವಸ್ತುಗಳಿಂದ ಪ್ರತ್ಯೇಕಿಸುವ ಮೂಲಕ ಗುರುತಿಸುವಿಕೆಯೇ ಅಪೋದ್ಧಾರ.

ಮೀಮಾಂಸಕರು ಪೃಥಕ್ತ್ವವನ್ನು ಅನ್ಯೋನ್ಯಾಭಾವದಲ್ಲಿಯೇ ಅಂತರ್ಗತಗೊಳಿಸುತ್ತಾರೆ. ಆದರೆ ಇವೆರಡೂ ವಿಭಿನ್ನವಿಷಯಗಳಾಗಿವೆ. घट: पटो न ಎಂಬ ಅನ್ಯೋನ್ಯಾಭಾವದಲ್ಲಿ 'ಘಟವು ಪಟವಲ್ಲ' ಎಂಬ ನೇತ್ಯಾತ್ಮಕಜ್ಞಾನವುಂಟಾದರೆ पटात् घट: पृथक् ಎಂಬಲ್ಲಿ 'ಘಟವು ಪಟದಿಂದ ಬೇರೆಯಾಗಿದೆ' ಎಂಬ ಇತ್ಯಾತ್ಮಕಜ್ಞಾನವುಂಟಾಗುತ್ತದೆ. ಪೃಥಕ್ತ್ವವು ಭೌತಿಕವ್ಯತ್ಯಾಸವಾದರೆ ಅನ್ಯೋನ್ಯಾಭಾವವು ಕಾಲ್ಪನಿಕವಾದುದು ಮಾತ್ರ. ಪೃಥಕ್ತ್ವವನ್ನು ಭಾಷಾಪ್ರಯೋಗದಿಂದ ಅರ್ಥೈಸಿಕೊಳ್ಳಬಹುದು. ಶ್ಯಾಮಘಟ ಬೇಯಿಸಿದ ಬಳಿಕ ರಕ್ತಘಟವಾಗಿ ಪರಿವರ್ತನೆಗೊಂಡಾಗ ಅವೆರಡೂ ಒಂದೇ ಎನ್ನಲಾಗದಿದ್ದರೂ ಒಂದು ಇನ್ನೊಂದರಿಂದ ಪೃಥಕ್ ಅಲ್ಲ.

24. ಸಂಯೋಗದ ಲಕ್ಷಣದಲ್ಲಿ 'ಸಂಯುಕ್ತ' ಎಂಬ ಪದವು ದಂಡಾದಿಗಳಲ್ಲಿ ಅತಿವ್ಯಾಪ್ತಿಯನ್ನು ನಿವಾರಿಸುತ್ತದೆ. ಸಾಧಾರಣಕಾರಣಗಳಾದ ಕಾಲಾದಿಗಳಲ್ಲಿ ಅತಿವ್ಯಾಪ್ತಿಯನ್ನು ನಿವಾರಿಸಲು ಲಕ್ಷಣದಲ್ಲಿ 'ಅಸಾಧಾರಣ' ಎಂಬ ಪದವನ್ನು ಸೇರಿಸಬೇಕು. 'ಸಂಯುಕ್ತ' ಎಂಬ ಶಬ್ದದಲ್ಲಿಯ ಶಬ್ದತ್ವದಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ 'ಹೇತು' ಎಂಬ ಪದವೂ ಲಕ್ಷಣದಲ್ಲಿದೆ.

ಸಂಯೋಗವೆಂದರೆ ಮೊದಲು ಬೇರೆಯಾಗಿದ್ದು ಈಗ ಸೇರಿಕೊಂಡಿರುವ ವಸ್ತುಗಳ ಸಂಬಂಧ— अप्राप्तयोस्तु या प्राप्तिः सैव संयोग ईरितः। ಅಥವಾ ಎರಡು ಯುತಸಿದ್ಧಗಳ ನಡುವಿನ ಸಂಬಂಧ. ಎರಡು ವಿಭುದ್ರವ್ಯಗಳು ಒಂದು ಇನ್ನೊಂದರಿಂದ ಯಾವಾಗಲೂ ಬೇರೆಯಾಗುವುದಿಲ್ಲ-ವಾದ್ದರಿಂದ ಅವುಗಳ ನಡುವಿನ ಸಂಯೋಗವು ನಿತ್ಯವಾಗಿರುತ್ತದೆ.

ಸಂಯೋಗದಲ್ಲಿ ಸಂಯೋಗಜ ಮತ್ತು ಕರ್ಮಜ ಎಂದು ಎರಡು ಪ್ರಕಾರ. ಹಸ್ತಪುಸ್ತಕ ಸಂಯೋಗದಿಂದ ದೇಹಪುಸ್ತಕಸಂಯೋಗವಾಗುವುದು ಸಂಯೋಗಜಸಂಯೋಗಕ್ಕೆ ಉದಾಹರಣೆ. ಕರ್ಮಜಸಂಯೋಗದಲ್ಲಿ ಅನ್ಯತರ ಮತ್ತು ಉಭಯ ಎಂದು ಮತ್ತೆರಡು ಉಪಭೇದಗಳಿವೆ. ಪಕ್ಷಿವೃಕ್ಷಸಂಯೋಗವು ಎರಡರಲ್ಲಿ ಒಂದರ ಕರ್ಮದಿಂದ ಮಾತ್ರ ಜನಿಸುವುದಾದ್ದರಿಂದ ಅನ್ಯತರ ಕರ್ಮಜಸಂಯೋಗದ ಉದಾಹರಣೆಯಾಗಿದೆ. ಮಲ್ಲಯುದ್ಧದಲ್ಲಿ ಮಲ್ಲರ ನಡುವಿನ ಸಂಯೋಗವು ಇಬ್ಬರ ಕರ್ಮದಿಂದಲೂ ಉಂಟಾಗುವುದರಿಂದ ಇದು ಉಭಯಕರ್ಮಜಸಂಯೋಗವಾಗಿದೆ.

ಸಂಯೋಗದ ಎಲ್ಲ ಪ್ರಕಾರಗಳೂ ಅವ್ಯಾಪ್ಯವೃತ್ತಿಗಳಾಗಿರುತ್ತವೆ, ಎಂದರೆ ವಸ್ತುಗಳ ಒಂದು ಪ್ರದೇಶದಲ್ಲಿ ಮಾತ್ರ ಸಂಯೋಗವು ಇರುತ್ತದೆ ಮತ್ತು ತನಗೆ ಆಶ್ರಯವಾದ ವಸ್ತುಗಳು ವಿಭಕ್ತವಾದಾಗ ಅಥವಾ ನಾಶವಾದಾಗ ಸಂಯೋಗವೂ ನಾಶವಾಗುತ್ತದೆ.

ವಿಭಾಗದ ಲಕ್ಷಣದಲ್ಲಿಯ ಗುಣ ಎಂಬ ಪದವು ಸಂಯೋಗನಾಶಕವಾದ ಕ್ರಿಯೆಯಲ್ಲಿ ಅತಿವ್ಯಾಪ್ತಿಯ ನಿವಾರಣೆ ಮಾಡುತ್ತದೆ. ವಿಭಜನೆಗೊಳ್ಳುವ ಕ್ರಿಯೆಯಿಂದ ಜನಿಸುವ ಗುಣವೇ ವಿಭಾಗ. ವಿಭಾಗವುಂಟಾಗುವ ಕ್ರಮ ಹೀಗಿದೆ—(1) ಒಂದು ಘಟವನ್ನು ಎತ್ತುವ ಕ್ರಿಯೆ (2) ವಿಭಾಗ (3) ಪೂರ್ವದೇಶಸಂಯೋಗನಾಶ (4) ಅಪರದೇಶಸಂಯೋಗ.

ವಿಭಾಗದಲ್ಲಿಯೂ ಸಂಯೋಗದಂತೆ ಪ್ರಭೇದಗಳಿದ್ದರೂ ವಿಭಾಗಜವಿಭಾಗವನ್ನು ವೈಶೇಷಿಕರು ಮಾತ್ರ ಅಂಗೀಕರಿಸುತ್ತಾರೆ.

25. ಪರತ್ವಾಪರತ್ವಗಳ ಲಕ್ಷಣದಲ್ಲಿಯ ದಳಗಳ ಪ್ರಯೋಜನವನ್ನು ಪೂರ್ವದಂತೆ ಕಲ್ಪಿಸಿ-ಕೊಳ್ಳಬೇಕು. ಪರತ್ವಾಪರತ್ವಗಳು ಮೂರ್ತದ್ರವ್ಯಗಳಲ್ಲಿ ಮಾತ್ರ ಇರುತ್ತವೆ. ವಾಸ್ತವವಾಗಿ ಕಾಲ ಮತ್ತು ದೇಶಗಳ ಜೊತೆ ಮೂರ್ತದ್ರವ್ಯಗಳ ಸಂಬಂಧವೇ ಪರತ್ವಾಪರತ್ವ. ಮೂರ್ತದ್ರವ್ಯಗಳಲ್ಲಿ ಪರಿವರ್ತನೆ ಹೊಂದುತ್ತಿರುವ ಅವಸ್ಥೆಗಳನ್ನು ಸೂಚಿಸುವ ಸಲುವಾಗಿ ಪರತ್ವಾಪರತ್ವವೆಂಬ ಗುಣಗಳ ಕಲ್ಪನೆಯಿದೆ. ಮನಸ್ಸು ಮೂರ್ತದ್ರವ್ಯವಾದರೂ ನಿತ್ಯವಾದುದರಿಂದ ಕಾಲಕೃತವಾದ ಪರತ್ವಾಪರತ್ವಗಳು ಮನಸ್ಸಿಗೆ ಇರುವುದಿಲ್ಲ.

26. ಗುರುತ್ವದ ಲಕ್ಷಣದಲ್ಲಿ 'ಆದ್ಯ'ಪದವು ಉತ್ತರೋತ್ತರವಾದ ವೇಗದಲ್ಲಿ ಅತಿವ್ಯಾಪ್ತಿಯನ್ನು ನಿವಾರಿಸುತ್ತದೆ. 'ಅಸಮವಾಯಿ' ಎಂಬ ಪದವು ಪತನಕ್ಕೆ ಸಮವಾಯಿಕಾರಣವಾದ ಕ್ರಿಯೆಯನ್ನು ಮತ್ತು ನಿಮಿತ್ತಕಾರಣಗಳನ್ನು ವ್ಯಾವರ್ತನಗೊಳಿಸುತ್ತದೆ. ಪಟಾದಿಗಳನ್ನು ಕುರಿತು ಅಸಮವಾಯಿ-ಕಾರಣವಾದ ತಂತುಸಂಯೋಗಾದಿಗಳಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ 'ಪತನ' ಎಂಬ ಪದವಿದೆ. ಗುರುತ್ವವನ್ನು अधोदेशसंयोगानुकूलो व्यापारः ಎಂದೂ ಲಕ್ಷಿಸಲಾಗಿದೆ.

ಗುರುತ್ವವೆಂಬುದಕ್ಕೆ ತೂಕ (Weight) ಮತ್ತು ಭಾರ (Heaviness) ಎಂದು ಎರಡು ಅರ್ಥಗಳಿವೆ. ಇಲ್ಲಿ 'ಭಾರ' ಎಂಬರ್ಥದಲ್ಲಿ ಗುರುತ್ವ ಪದಪ್ರಯೋಗವಿದೆ. ಈ ಅರ್ಥದಲ್ಲಿ ಗುರುತ್ವ-ವಿರುದ್ಧವಾದುದು 'ಲಘುತ್ವ'. ತೂಕ ಎಂಬ ಅರ್ಥದಲ್ಲಿ ಗುರುತ್ವವು ಲಘುವಸ್ತುಗಳಲ್ಲಿಯೂ ಇರುತ್ತದೆ. ತೇಜಸ್ಸು ಗುರುತ್ವರಹಿತವಾದರೂ ಅದರ ವಿಷಯಗಳಾದ ಸುವರ್ಣಾದಿಧಾತುಗಳಲ್ಲಿರುವ ಗುರುತ್ವಕ್ಕೆ ಪಾರ್ಥಿವ ಅಂಶವೇ ಕಾರಣವಾಗಿದೆ. ಗುರುತ್ವವು ಅತೀಂದ್ರಿಯವಾಗಿದ್ದು ಅನುಮೇಯವಾಗಿರುತ್ತದೆ.

ದ್ರವತ್ವಲಕ್ಷಣದಲ್ಲಿಯ ದಳಪ್ರಯೋಜನವನ್ನು ಮೇಲಿನಂತೆ ಕಲ್ಪಿಸಿಕೊಳ್ಳಬೇಕು.

ಪತನ ಮತ್ತು ಪ್ರವಹಣಗಳು ಮೂಲತಃ ಒಂದೇ ಆಗಿದ್ದು ಘನವಸ್ತುಗಳು ಯಾವುದೊಂದು ಪಾತಳಿಯ ಮೇಲಿನಿಂದ ಕೆಳಗೆ ಬರುವುದು ಪತನವಾದರೆ, ದ್ರವವಸ್ತುಗಳು ಮೇಲಿನಿಂದ ಕೆಳಗೆ ಬರುವುದು ಪ್ರವಹಣವಾಗುತ್ತದೆ. ಸಾಂಸಿದ್ಧಿಕವೆಂದರೆ ಸಹಜವಾದ ದ್ರವತ್ವ ಮತ್ತು ನೈಮಿತ್ತಿಕವೆಂದರೆ ತೇಜಃಸಂಯೋಗ ಎಂಬ ನಿಮಿತ್ತದಿಂದ ಉಂಟಾದ ದ್ರವತ್ವ.

ತಾರ್ಕಿಕರು ತೇಜಸ್ಸಿನಲ್ಲಿಯೂ ದ್ರವತ್ವವನ್ನು ಅಂಗೀಕರಿಸುತ್ತಾರೆ. ಧಾತುಗಳಲ್ಲಿಯ ದ್ರವತ್ವವು ಅಗ್ನಿಸಂಯೋಗಜನ್ಯವಾದುದು. ಅವುಗಳಲ್ಲಿಯ ಗುರುತ್ವಕ್ಕೆ ಹೇಗೆ ಪೃಥಿವೀ ಕಾರಣವೋ ಹಾಗೆಯೇ ದ್ರವತ್ವಕ್ಕೆ ಅವುಗಳಲ್ಲಿ ಸೇರಿಕೊಂಡಿರುವ ಜಲವೇ ಕಾರಣವೆಂದು ಆಕ್ಷೇಪಿಸಬಹುದು. ಆದರೆ ಜಲದಲ್ಲಿಯ ದ್ರವತ್ವ ಸಾಂಸಿದ್ಧಿಕವಾದುದು. ಇನ್ನು ಧಾತುದ್ರವತ್ವ ಪೃಥಿವಿಯ ಅಂಶದಿಂದ ಉಂಟಾದುದು ಎಂದು ಆಕ್ಷೇಪಿಸಬಹುದು. ಆದರೆ ಅತ್ಯಂತಾಗ್ನಿಸಂಯೋಗದಲ್ಲಿಯೂ ಇವುಗಳಲ್ಲಿಯ ದ್ರವತ್ವ ಅನುಚ್ಛಿದ್ಯಮಾನವಾಗಿರುವುದರಿಂದ ಧಾತುದ್ರವತ್ವವು ಜಲದ್ರವತ್ವ ಮತ್ತು ಪೃಥಿವೀದ್ರವತ್ವಕ್ಕಿಂತ ಭಿನ್ನವಾದುದು. ಇದರ ವಿಶೇಷ ವಿವರಣೆಯನ್ನು 'ತೇಜಸ್' ನಿರೂಪಣೆಯಲ್ಲಿ (ಪರಿಚ್ಛೇದ 12ರಲ್ಲಿ) ನೀಡಲಾಗಿದೆ.

27. ಸ್ನೇಹದ ಲಕ್ಷಣದಲ್ಲಿ ಕಾಲಾದಿಗಳಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ 'ಗುಣ' ಎಂಬ ಪದವನ್ನೂ, ರೂಪಾದಿಗಳಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ 'ಚೂರ್ಣಾದಿಪಿಂಡೀಭಾವ' ಎಂಬ ಪದವನ್ನೂ ಕೊಡಲಾಗಿದೆ. ಸಾಮಾನ್ಯವಾಗಿ ಹೇತು ಎಂಬುದನ್ನೇ 'ಅಸಾಧಾರಣಹೇತು' ಎಂಬುದಾಗಿ ಅಂಗೀಕರಿಸುವಾಗ 'ಗುಣ'ಪದ ಕಾಲಾದಿಗಳಲ್ಲಿ ಅತಿವ್ಯಾಪ್ತಿನಿವಾರಣೆಯ ಬದಲು ಪಿಂಡೀಭವನ 'ಕ್ರಿಯೆ'ಯಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ ಪ್ರಯೋಗಿಸಲ್ಪಟ್ಟಿರುವುದು ಸಾಧುವಾಗಿ ತೋರುತ್ತದೆ.

ಪಿಂಡೀಭಾವಕ್ಕೆ ದ್ರವತ್ವಕಾರಣವಾಗದೇ ಸ್ನೇಹವೇ ಕಾರಣವಾಗಿರುತ್ತದೆ. ಏಕೆಂದರೆ ಕರಗಿದ ಸುವರ್ಣದ ಸಂಯೋಗವಿರುವಾಗ ಚೂರ್ಣಾದಿಗಳ ಪಿಂಡೀಭಾವ ಸಾಧ್ಯವಾಗುವುದಿಲ್ಲ. ಆದ್ದರಿಂದ ದ್ರವತ್ವಭಿನ್ನವಾದ 'ಸ್ನೇಹ' ಎಂಬ ಗುಣವನ್ನು ಅಂಗೀಕರಿಸಲಾಗಿದೆ. ಪಿಂಡೀಭಾವಕ್ಕೆ ದ್ರುತಜಲ ಸಂಯೋಗ (ದ್ರವರೂಪಿಜಲಸಂಯೋಗ) ಕಾರಣವೇ ಹೊರತು ಸ್ನೇಹವಲ್ಲ ಎಂಬುದು ಕೆಲವರ ಅಭಿಪ್ರಾಯ. ಆದರೆ ದ್ರವತ್ವವೇ ಪಿಂಡೀಭಾವಕ್ಕೆ ನಿಜವಾಗಿ ಕಾರಣವೆಂದು ತೋರುತ್ತದೆ.

28. ಶಬ್ದದ ಲಕ್ಷಣದಲ್ಲಿ 'ಗುಣ' ಎಂಬ ಪದವು ಶಬ್ದತ್ವ, ಶಬ್ದಾಭಾವಗಳಲ್ಲಿ ಅತಿವ್ಯಾಪ್ತಿ ನಿವಾರಣೆಗಾಗಿಯೂ 'ಶ್ರೋತ್ರಗ್ರಾಹ್ಯ' ಎಂಬುದು ರೂಪಾದಿಗಳಲ್ಲಿ ಅತಿವ್ಯಾಪ್ತಿನಿವಾರಣೆಗಾಗಿಯೂ

ಪ್ರಯೋಗಿಸಲ್ಪಟ್ಟಿವೆ. ಶ್ರೋತ್ರೇಂದ್ರಿಯದಿಂದ ಶಬ್ದವೊಂದೇ ಗ್ರಹಿಸಲ್ಪಡುವುದರಿಂದ ರೂಪದಂತೆ ಲಕ್ಷಣದಲ್ಲಿ 'ಮಾತ್ರ'ಪದವನ್ನು ನೀಡಿಲ್ಲ.

ತಾರ್ಕಿಕರ ಪ್ರಕಾರ ಶ್ರೋತ್ರೇಂದ್ರಿಯವೆಂದರೆ ಕರ್ಣಶಷ್ಕುಲ್ಯವಚ್ಛಿನ್ನಾಕಾಶ:– ಚಕ್ಕುಲಿಯಾಕಾರದ ಹೊರಗಿವಿಯಿಂದ ಆವೃತವಾದ ಆಕಾಶ. ಚಕ್ಷುರಿಂದ್ರಿಯ ವಸ್ತು ಇರುವಲ್ಲಿಗೆ ಹೋಗಿ ವಸ್ತುಜ್ಞಾನವನ್ನುಂಟುಮಾಡುವಂತೆ ಶ್ರೋತ್ರೇಂದ್ರಿಯ ಶಬ್ದೋತ್ಪತ್ತಿಸ್ಥಾನಕ್ಕೆ ಹೋಗಿ ಶಬ್ದಜ್ಞಾನವನ್ನುಂಟು-ಮಾಡಲಾರದು. ಏಕೆಂದರೆ ಶ್ರೋತ್ರವೆಂದರೆ ವಿಭುವಾದ ಚಲನರಹಿತವಾದ ಆಕಾಶವೇ ಆಗಿದೆ. ಆದ್ದರಿಂದ ಶಬ್ದವೇ ಶ್ರೋತ್ರದ ಬಳಿ ಆಗಮಿಸಬೇಕು. ಆದರೆ ಇಲ್ಲಿಯೂ ಒಂದು ತೊಡಕಿದೆ. ಶಬ್ದವು ಆಕಾಶದ ಗುಣವಾಗಿದ್ದು ಅದರೊಡನೆ ಸಮವಾಯದಿಂದ ಕೂಡಿದೆ. ಗುಣಿಯಾದ ಆಕಾಶ ಚಲಿಸಲಾರದ್ದರಿಂದ ಗುಣವಾದ ಶಬ್ದವೂ ಚಲಿಸಲಾರದು. ಜೊತೆಗೆ ತಾರ್ಕಿಕರ ಪ್ರಕಾರ ಶಬ್ದ ಅನಿತ್ಯ. ಆದ್ದರಿಂದ ಶ್ರೋತ್ರೇಂದ್ರಿಯದ ಹೊರಗೆ ಆಕಾಶದ ಒಂದು ನಿರ್ದಿಷ್ಟಸ್ಥಾನದಲ್ಲಿ ಉಂಟಾದ ಪ್ರಥಮಶಬ್ದ ತನ್ನ ಸಮೀಪದ ಆಕಾಶದಲ್ಲಿ ಸ್ವಸದೃಶಶಬ್ದವನ್ನುಂಟುಮಾಡುತ್ತದೆ ಎಂದು ಕಲ್ಪಿಸುತ್ತಾರೆ. ಹೀಗೆ ಶ್ರೋತ್ರೇಂದ್ರಿಯಕ್ಕೆ ಶಬ್ದ ತಲುಪುತ್ತದೆ. ಇದೇ ಶಬ್ದಜ ಶಬ್ದ.

ಶಬ್ದಚಲನೆಗೆ ಸಂಬಂಧಿಸಿದಂತೆ ಎರಡು ವಾದಗಳಿವೆ. ವೀಚೀತರಂಗನ್ಯಾಯದ ಪ್ರಕಾರ ಸಮುದ್ರದ ಅಲೆಗಳಂತೆ ಶಬ್ದವು ಒಂದೇ ದಿಕ್ಕಿನಲ್ಲಿ ಚಲಿಸುತ್ತದೆ ಎಂಬುದೊಂದು; ಕದಂಬಕೋರಕ-ನ್ಯಾಯದ ಪ್ರಕಾರ ಕದಂಬದ ಮೊಗ್ಗು ಎಲ್ಲ ದಿಕ್ಕುಗಳಲ್ಲಿ ದಳವರಳಿಸಿ ಹೂವಾಗುವಂತೆ ಶಬ್ದವೂ ಎಲ್ಲ ದಿಕ್ಕುಗಳಲ್ಲಿ ಚಲಿಸುತ್ತದೆ ಎಂಬುದಿನ್ನೊಂದು. ಇವೆರಡರಲ್ಲಿ ಕದಂಬಕೋರಕನ್ಯಾಯವೇ ಸಮರ್ಪಕ-ವಾದುದೆಂಬುದು ಅನುಭವಸಿದ್ಧ. ಆಧುನಿಕವಿಜ್ಞಾನದ ಪ್ರಕಾರ ಶ್ರೋತ್ರೇಂದ್ರಿಯವೆಂದರೆ ಕಿವಿ-ಯೊಳಗಿನ 'ಪಟಲ' (Tympanum) ಮತ್ತು ಶಬ್ದ ಒಯ್ಯಲ್ಪಡುವುದು ಗಾಳಿಯ ಕಣಗಳ ಏರಿಳಿತ-ದಿಂದ (Undulation). ಶಬ್ದದಲ್ಲಿ ಸಂಯೋಗಜ, ವಿಭಾಗಜ ಮತ್ತು ಶಬ್ದಜ ಎಂದು ಒಂದು ವಿಧವಾಗಿ ವಿಭಾಗವನ್ನು ಕಲ್ಪಿಸಲಾಗಿದೆ. ಹಸ್ತತಾಲ(ಚಪ್ಪಾಳೆ)ವು ಸಂಯೋಗಜವೂ, ಬಿದಿರು ಮುಂತಾದವುಗಳನ್ನು ಸೀಳುವಿಕೆಯಿಂದ ಉಂಟಾದುದು ವಿಭಾಗಜವೂ, ಪ್ರಥಮಶಬ್ದದಿಂದ ಹುಟ್ಟಿದ ಉತ್ತರೋತ್ತರಶಬ್ದಗಳು ಶಬ್ದಜವೂ ಆಗಿವೆ. ಶಬ್ದವನ್ನು ಹೀಗೆಯೂ ವಿಭಜಿಸುತ್ತಾರೆ:



29. ಬುದ್ಧಿಯ ಲಕ್ಷಣದಲ್ಲಿ 'ಸರ್ವ' ಎಂಬ ಪದವು ಸಂಖ್ಯಾದಿಗಳಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ ಪ್ರಯೋಗಿಸಲ್ಪಟ್ಟಿದೆ. ಸಂಖ್ಯಾದಿಗಳು ವ್ಯವಹಾರಹೇತುಗಳೂ ಗುಣಗಳೂ ಆಗಿದ್ದರೂ ಅವು ಸರ್ವವ್ಯವಹಾರಹೇತುಗಳಲ್ಲ. ತರ್ಕಸಂಗ್ರಹದ ಕೆಲವು ಆವೃತ್ತಿಗಳಲ್ಲಿ 'ಗುಣ' ಪದಪ್ರಯೋಗವಿದ್ದು ಅದು ಘಟಪಟಾದಿಗಳಲ್ಲಿ ಅತಿವ್ಯಾಪ್ತಿನಿವಾರಣೆ ಮಾಡುತ್ತದೆ. ವ್ಯವಹಾರವೆಂದರೆ ಶಬ್ದಪ್ರಯೋಗ ಮತ್ತು ಶಬ್ದಪ್ರಯೋಗವು ಜ್ಞಾನವಿಲ್ಲದೆ ಅಸಂಭವ. ಆದ್ದರಿಂದ ಲಕ್ಷಣದಲ್ಲಿ 'ಜ್ಞಾನ' ಎಂಬ ಪದವಿದೆ. ದೀಪಿಕೆಯು जानामीत्यनुव्यवसायगम्यज्ञानम् ಎಂಬುದಾಗಿ ಬುದ್ಧಿಯ ಪರಿಷ್ಕೃತಲಕ್ಷಣವನ್ನು ಕೊಡುತ್ತದೆ. ತಾರ್ಕಿಕರ ಪ್ರಕಾರ ವಿಷಯಜ್ಞಾನವು ಇಂದ್ರಿಯಾರ್ಥಸನ್ನಿಕರ್ಷ, ಜ್ಞಾನ ಮತ್ತು ಅನುವ್ಯವಸಾಯ ಎಂಬ ಮೂರು ಸ್ತರಗಳನ್ನು ಹೊಂದಿದೆ. ಉದಾಹರಣೆಯೊಂದರಿಂದ ಇವುಗಳನ್ನು ವಿವರಿಸುವುದಿದ್ದರೆ ಚಕ್ಷುರಿಂದ್ರಿಯವು ಮೊದಲು ವಿಷಯವಾದ ಘಟಾದಿಗಳೊಡನೆ ಸಂಪರ್ಕವನ್ನು ಹೊಂದುತ್ತದೆ. ಬಳಿಕ ಮನಸ್ಸಿಗೆ ವಸ್ತುಸ್ವರೂಪದ ಬಿಂಬಕಲ್ಪನೆಯನ್ನು ನೀಡುತ್ತದೆ. ಮನಸ್ಸು ಅದನ್ನು ಆತ್ಮನಿಗೆ ತಲುಪಿಸುತ್ತದೆ. ಈ ಬಿಂಬಕಲ್ಪನೆಯೇ 'ಇದು ಘಟ' ಎಂಬ ಜ್ಞಾನವಾಗಿ ಪರಿವರ್ತನೆ-ಗೊಳ್ಳುತ್ತದೆ. ಇಂತಹ ಘಟಜ್ಞಾನವು ಆತ್ಮನ ಗುಣವಾದ್ದರಿಂದ ಆತ್ಮನು 'ಘಟಜ್ಞಾನವಾನ್' ಆಗುತ್ತಾನೆ, ಬಳಿಕ ಅಹಂಕಾರದೊಡನೆ ಸೇರಿ 'ಘಟಜ್ಞಾನವಾನ್ ಅಹಮ್' ಅಥವಾ 'ಘಟಮಹಂ ಜಾನಾಮಿ' ಎಂಬ ಸಂಕೀರ್ಣ ಅರಿವು ಉಂಟಾಗುತ್ತದೆ. ಈ ಅರಿವನ್ನೇ 'ಅನುವ್ಯವಸಾಯ' ಎನ್ನುತ್ತಾರೆ.

ಸಾಂಖ್ಯರ ಪ್ರಕಾರ ಬುದ್ಧಿಯು ಪ್ರಕೃತಿಯ ಪ್ರಥಮಕಾರ್ಯವಾದ 'ಮಹತ್' ಎಂಬ ತತ್ತ್ವ. ವೇದಾಂತಿಗಳು ನಿಶ್ಚಯಾತ್ಮಕವೃತ್ತಿಸಹಿತವಾದ ಅಂತಃಕರಣವನ್ನೇ 'ಬುದ್ಧಿ' ಎನ್ನುತ್ತಾರೆ. ಈಶ್ವರನ ಬುದ್ಧಿಯು ನಿತ್ಯವೂ, ಜೀವಾತ್ಮನದು ಅನಿತ್ಯವೂ ಆಗಿರುತ್ತದೆ.

'ಬುದ್ಧಿ' ಎಂಬ ಶಬ್ದಕ್ಕೆ ತಿಳಿವಳಿಕೆ (Understanding), ಜ್ಞಾನಸಾಧನ (Intellect) ಮತ್ತು ಜ್ಞಾನ (Cognition) ಎಂಬ ಮೂರು ಅರ್ಥಗಳಿದ್ದು ಈ ಗ್ರಂಥದಲ್ಲಿ ಜ್ಞಾನ ಎಂಬ ಮೂರನೆಯ ಅರ್ಥದಲ್ಲಿ ಬುದ್ಧಿ ಶಬ್ದಪ್ರಯೋಗವಿದೆ.

ಸ್ಮೃತಿಯ ಲಕ್ಷಣದಲ್ಲಿ 'ಜ್ಞಾನ' ಎಂದಷ್ಟೇ ಹೇಳಿದರೆ ಅನುಭವದಲ್ಲಿ ಅತಿವ್ಯಾಪ್ತಿ ಬರುತ್ತದೆ. 'ಸಂಸ್ಕಾರಮಾತ್ರಜನ್ಯಮ್' ಎಂದರೆ ಸಂಸ್ಕಾರಧ್ವಂಸವೂ ಸಂಸ್ಕಾರಮಾತ್ರಜನ್ಯವಾದುದರಿಂದ ಅದರಲ್ಲಿ ಅತಿವ್ಯಾಪ್ತಿ ಬರುತ್ತದೆ. 'ಮಾತ್ರ' ಎಂಬ ಪದವನ್ನು ಪ್ರಯೋಗಿಸದಿದ್ದಲ್ಲಿ ಪ್ರತ್ಯಭಿಜ್ಞೆಯಲ್ಲಿ ಅತಿವ್ಯಾಪ್ತಿ ಬರುತ್ತದೆ. ಪ್ರತ್ಯಭಿಜ್ಞಾ ಎಂದರೆ प्रत्यक्षसहकृतसंस्कारजन्यं ज्ञानम्। ಎದುರಿಗಿರುವ ವಸ್ತುವಿನಲ್ಲಿ ಹಿಂದೆ ನೋಡಿದ ವಸ್ತುವೇ ಇದು ಎಂಬ ಅಭೇದವನ್ನು ಗ್ರಹಿಸುವ ಜ್ಞಾನವೇ ಪ್ರತ್ಯಭಿಜ್ಞಾ. ಉದಾಹರಣೆಗೆ—ಆನೆಯೊಂದರ ಮೇಲೆ ಮಾವುತನನ್ನು ಒಮ್ಮೆ ನೋಡಿದವನು ಇನ್ನೊಮ್ಮೆ ಅದೇ ಆನೆಯನ್ನು ನೋಡಿದಾಗ 'ಇದು ಈ ಹಿಂದೆ ನೋಡಿದ ಆನೆ' ಎಂದು ಗುರುತಿಸುವುದು ಪ್ರತ್ಯಭಿಜ್ಞೆ. ಆನೆಯ ಮೇಲೆ ಇಲ್ಲದ ಮಾವುತನನ್ನು ನೆನಪಿಸಿಕೊಳ್ಳುವುದು ಸ್ಮೃತಿ.

ಆಧುನಿಕ ಭಾಷಾಪ್ರಯೋಗದಲ್ಲಿ ಸ್ಮೃತಿ ಎಂಬುದಕ್ಕೆ ಸ್ಮರಣ, ಚಿಂತನ ಮತ್ತು ಜ್ಞಾಪನ ಎಂಬ ಮೂರು ಸೂಕ್ಷ್ಮಾರ್ಥಗಳಿದ್ದು ತಾರ್ಕಿಕರು ಈ ಮೂರೂ ಅರ್ಥಗಳಲ್ಲಿ 'ಸ್ಮೃತಿ'ಪದವನ್ನು ಪ್ರಯೋಗಿಸಿರುವ ಸಾಧ್ಯತೆ ಇದೆ.

ಇಲ್ಲಿ 'ಸಂಸ್ಕಾರ' ಎಂಬ ಪದ 'ಭಾವನಾ' ಎಂಬ ಸಂಸ್ಕಾರಪ್ರಭೇದದ ಅರ್ಥದಲ್ಲಿ

ಪ್ರಯೋಗಿಸಲ್ಪಟ್ಟಿದೆ. (ಸಂಸ್ಕಾರದ ವಿವರಣೆಗೆ ಪರಿಚ್ಛೇದ 50 ನೋಡಿ). ಸ್ಮೃತಿಯಲ್ಲಿಯೂ ಪ್ರತ್ಯಕ್ಷದ ಸಹಕಾರವಿದ್ದಂತೆ ತೋರಿದರೂ ಪ್ರತ್ಯಭಿಜ್ಞೆಯಂತೆ ಸ್ಮೃತಿಯಲ್ಲಿ ಪ್ರತ್ಯಕ್ಷದ ನೇರವಾದ ಸಹಕಾರವಿಲ್ಲ.

ದೀಪಿಕೆಯಲ್ಲಿ ಅನುಭವದ ಲಕ್ಷಣವನ್ನು स्मृतिभिन्नं ज्ञानम् ಎಂದು ಕೊಡಲಾಗಿದೆ. ಅನುಭವವೆಂದರೆ ಪೂರ್ವಜ್ಞಾನದ ಯಾವುದೇ ಸಹಕಾರವಿಲ್ಲದೇ ಇದಂಪ್ರಥಮವಾಗಿ ಉಂಟಾಗುವ ಜ್ಞಾನ. ವಸ್ತುವನ್ನು ಅದು ಇರುವಂತೆ ಗ್ರಹಿಸುವ ಜ್ಞಾನ ಯಥಾರ್ಥ— यथाभूत: अर्थ: यस्मिन् स: । ಒಂದು ವಸ್ತುವಿನ ಧರ್ಮ ಆ ವಸ್ತುವಿನ ಜ್ಞಾನದಲ್ಲಿ ಪ್ರಕಾರವಾಗಿ ತೋರುವುದು ಯಥಾರ್ಥಾನುಭವ. ಆದರೆ ಈ ವ್ಯಾಖ್ಯೆಯು घटे घटत्वम् ಎಂಬ ಜ್ಞಾನದಲ್ಲಿ ಅವ್ಯಾಪ್ತವಾಗುತ್ತದೆ. ಏಕೆಂದರೆ ಈ ಜ್ಞಾನವು घटप्रकारक घटत्वविशेष्यक ಸ್ವರೂಪದ್ದಾಗಿದೆ. ಆದರೆ ಘಟತ್ವದಲ್ಲಿ ಘಟದ ಅಭಾವವಿದೆ. ಆದ್ದರಿಂದ तद्वति तत्प्रकारक: ಎಂಬುದು ಇಲ್ಲಿ ಅನ್ವಯಿಸುವುದಿಲ್ಲ. ಈ ಅವ್ಯಾಪ್ತಿಯನ್ನು ನಿವಾರಿಸಲು तद्वति ಎಂಬುದಕ್ಕೆ तत्सम्बन्धवति ಎಂದು ಅರ್ಥೈಸಬೇಕು. ಆಗ ಘಟತ್ವವು ಘಟಸಂಬಂಧದ ಅಧಿಕರಣವಾಗುತ್ತದೆ. ಹೀಗೆ ಅವ್ಯಾಪ್ತಿದೋಷ ನಿವಾರಣೆಯಾಗುತ್ತದೆ.

ವಿಶೇಷ್ಯ, ವಿಶೇಷಣ ಮತ್ತು ಪ್ರಕಾರಗಳಲ್ಲಿಯ ವ್ಯತ್ಯಾಸ ಹೀಗಿದೆ—ಅನುಭವಕ್ಕೆ ಯಾವುದು ವಿಷಯವಾಗುವುದೋ ಅದೇ ವಿಶೇಷ್ಯ. ಅದರಲ್ಲಿರುವ ಅಸಾಧಾರಣಧರ್ಮವೇ ವಿಶೇಷಣ. ಆ ಧರ್ಮವು ಆ ವಸ್ತುವಿನ ಜ್ಞಾನದ ವೈಶಿಷ್ಟ್ಯವಾದಾಗ 'ಪ್ರಕಾರ' ಎನಿಸುತ್ತದೆ. ಹೀಗೆ ವಿಶೇಷಣವು ವಿಷಯನಿಷ್ಠವೂ ಪ್ರಕಾರವು ಜ್ಞಾನನಿಷ್ಠವೂ ಆಗಿರುತ್ತದೆ. ಉದಾಹರಣೆಗೆ— इदं रजतम् ಎಂಬ ಜ್ಞಾನದಲ್ಲಿ ರಜತತ್ವವು ರಜತದ ವಿಶೇಷಣವೂ ರಜತಜ್ಞಾನದ ಪ್ರಕಾರವೂ ಆಗಿದೆ.

ಒಂದು ವಸ್ತುವಿನ ಜ್ಞಾನದಲ್ಲಿ ಇನ್ನೊಂದು ವಸ್ತುವಿನ ಧರ್ಮವು ಪ್ರಕಾರವಾಗಿ ತೋರುವುದೇ ಅಯಥಾರ್ಥ. ಉದಾಹರಣೆಗೆ, ರಜತತ್ವವನ್ನು ಹೊಂದಿರದ ಶುಕ್ತಿಯ ಜ್ಞಾನದಲ್ಲಿ ರಜತತ್ವವು ಪ್ರಕಾರವಾಗಿ ತೋರುವ ಜ್ಞಾನ.

ಇದೇ ರೀತಿಯ ಇನ್ನೊಂದು ಉದಾಹರಣೆಯೆಂದರೆ ರಜ್ಜು-ಸರ್ಪಜ್ಞಾನ. ಇಲ್ಲಿ ರಜ್ಜುವಿನಲ್ಲಿ (ಹಗ್ಗದಲ್ಲಿ) ಸರ್ಪದ ಪ್ರತೀತಿಯಾಗುತ್ತದೆ. ರಜ್ಜುವು ರಜ್ಜುತ್ವವನ್ನು ಹೊಂದಿದೆ. ಆದರೆ ಅದನ್ನು ಕುರಿತ ನಮ್ಮ ಜ್ಞಾನದಲ್ಲಿ ರಜ್ಜುತ್ವದ ಬದಲು ಸರ್ಪತ್ವ ಪ್ರತೀತವಾಗುತ್ತದೆ. ಆತ್ಯಂತಿಕವಾಗಿ ನಮಗೆ ಪ್ರತೀತವಾಗುವುದು ಸರ್ಪ. ಇರುವ ವಸ್ತು ರಜ್ಜು. ಹೀಗಾಗಿ ಇದು ಅಯಥಾರ್ಥಾನುಭವ. ಇದನ್ನೇ ಭ್ರಮ ಎಂದೂ ಕರೆಯಲಾಗುತ್ತದೆ.

ಅಯಥಾರ್ಥಾನುಭವದ ವ್ಯಾಖ್ಯೆ ಕೆಲವೆಡೆ ದೋಷಪೂರ್ಣವಾಗಬಹುದು. ಉದಾಹರಣೆಗೆ ವೃಕ್ಷ-ಕಪಿಸಂಯೋಗ. ಮರವೊಂದರ ತುದಿಯ ರೆಂಬೆಯ ಮೇಲೆ ಮಂಗವಿದೆ. ಆದರೆ ಬುಡದಲ್ಲಿ ಇಲ್ಲ. ಇದರಿಂದಾಗಿ ಮಂಗ ಇರುವ ಮರದಲ್ಲಿಯೇ ಮಂಗದ ಅಭಾವವೂ ತೋರುತ್ತದೆ. ಆದ್ದರಿಂದ कपिसंयोगी वृक्ष: ಎಂಬ ಜ್ಞಾನದಲ್ಲಿ ಅಯಥಾರ್ಥಾನುಭವದ ವ್ಯಾಖ್ಯೆ ಅತಿವ್ಯಾಪ್ತವಾಗುತ್ತದೆ. ಮರ ಹಾಗೂ ಮಂಗದ ನಡುವೆ ಸಂಯೋಗಸಂಬಂಧವಿದೆ. ಸಂಯೋಗ ಎಂಬುದು ಒಂದು ಗುಣ. ಮರವು ದ್ರವ್ಯ. ದ್ರವ್ಯ-ಗುಣಗಳ ನಡುವೆ ಇರುವ ಸಂಬಂಧ ಸಮವಾಯ. ಈ ಸಮವಾಯ ಸಂಬಂಧದಿಂದ ಕಪಿಸಂಯೋಗದ ಅಭಾವವನ್ನು ಹೇಳಲಾಗುವುದಿಲ್ಲ. ಏಕೆಂದರೆ ಸಂಯೋಗದ ಅಭಾವ ವಿಶೇಷಣ–ವಿಶೇಷ್ಯಸಂಬಂಧದಿಂದ ಇರುತ್ತದೆ. ಆದ್ದರಿಂದ ಲಕ್ಷಣ ಅತಿವ್ಯಾಪ್ತವಾಗುವುದಿಲ್ಲ.

ಇನ್ನು ಅಭಾವವನ್ನು ಯಾವ ನಿಶ್ಚಿತ ಅಧಿಕರಣದಲ್ಲಿ ಹೇಳಲಾಗುವುದೋ ಅದೇ ನಿಶ್ಚಿತ ಅಧಿಕರಣದಲ್ಲಿ ಕಪಿ-ಸಂಯೋಗವಿದ್ದರೆ ಲಕ್ಷಣ ಅತಿವ್ಯಾಪ್ತವಾಗಲು ಸಾಧ್ಯ. ಆದರೆ ಪ್ರಸ್ತುತ ಉದಾಹರಣೆಯಲ್ಲಿ ಕಪಿಸಂಯೋಗ ಶಾಖಾಗ್ರದಲ್ಲಿ; ಅದರ ಅಭಾವ ವೃಕ್ಷಮೂಲದಲ್ಲಿ. ಹೀಗಾಗಿ ಏಕಾಧಿಕರಣವಿಲ್ಲ. ಆದ್ದರಿಂದಲೂ ಲಕ್ಷಣ ಅತಿವ್ಯಾಪ್ತವಾಗುವುದಿಲ್ಲ.

30. ಯಥಾರ್ಥಾನುಭವದ ಪ್ರತ್ಯಕ್ಷ, ಅನುಮತಿ, ಉಪಮಿತಿ ಮತ್ತು ಶಾಬ್ದ ಎಂಬ ಪ್ರಭೇದಗಳಿಗೆ ಕ್ರಮವಾಗಿ ಪ್ರತ್ಯಕ್ಷ, ಅನುಮಾನ, ಉಪಮಾನ ಮತ್ತು ಶಬ್ದಗಳು ಕರಣಗಳಾಗಿವೆ. ಗ್ರಂಥಕಾರನು ಸಾಂದರ್ಭಿಕವಾಗಿ ಕರಣ, ಕಾರಣ ಮತ್ತು ಕಾರ್ಯಗಳನ್ನು ವಿವರಿಸುತ್ತಾನೆ. ಕಾರಣದ ಲಕ್ಷಣವು ಕಾರ್ಯವನ್ನು, ಕರಣದ ಲಕ್ಷಣವು ಕಾರಣವನ್ನು ಅಪೇಕ್ಷಿಸುವುದರಿಂದ ಇಲ್ಲಿ ಕಾರ್ಯ, ಕಾರಣ ಮತ್ತು ಕರಣ ಎಂಬ ಕ್ರಮದಲ್ಲಿ ವಿವರಿಸಲಾಗಿದೆ.

ಪ್ರತಿಯೊಂದು ವಸ್ತುವೂ ಉತ್ಪನ್ನವಾಗುವ ಪೂರ್ವದಲ್ಲಿ ಅದರ ಅಭಾವವಿರುತ್ತದೆ. ಈ ಅಭಾವಕ್ಕೆ ಪ್ರತಿಯೋಗಿಯಾಗಿರುವುದೇ ಕಾರ್ಯ.

ಸಾಮಾನ್ಯವಾಗಿ ಕಾರ್ಯಕ್ಕೆ ಪೂರ್ವಭಾವಿಯಾಗಿರುವುದೇ ಕಾರಣ. ಆದರೆ ಕಾರ್ಯಕ್ಕೆ ಪೂರ್ವವೃತ್ತಿಯಾಗಿರುವುದೆಲ್ಲವೂ ನಿಷ್ಕೃಷ್ಟಾರ್ಥದಲ್ಲಿ ಕಾರಣವಾಗುವುದಿಲ್ಲ. ಆದ್ದರಿಂದ ಲಕ್ಷಣದಲ್ಲಿ 'ನಿಯತ'ಪದಪ್ರಯೋಗವಿದೆ. ಉದಾಹರಣೆಗೆ, ಘಟ ಎಂಬ ಕಾರ್ಯಕ್ಕೆ ಮಣ್ಣನ್ನು ಹೊತ್ತು ತರುವ ಕತ್ತೆಯು ಪೂರ್ವವರ್ತಿಯಾಗಿದ್ದರೂ ನಿಯತವಲ್ಲ. 'ಪೂರ್ವವೃತ್ತಿ' ಎಂಬ ಪದಪ್ರಯೋಗವಿಲ್ಲದಿದ್ದರೆ ಕಾರ್ಯದಲ್ಲಿಯೇ ಅತಿವ್ಯಾಪ್ತಿ ಬರುತ್ತದೆ. ಹೀಗಿದ್ದರೂ ಕುಂಭಕಾರನ ತಂದೆಯೂ ಘಟವೆಂಬ ಕಾರ್ಯಕ್ಕೆ ಪೂರ್ವವೃತ್ತಿಯಾದುದರಿಂದ ಅವನಲ್ಲಿ ಅತಿವ್ಯಾಪ್ತಿ ಬರುತ್ತದೆ. ಆದ್ದರಿಂದ ಉಕ್ತಲಕ್ಷಣಕ್ಕೆ ದೀಪಿಕೆಯಲ್ಲಿ अनन्यथासिद्धत्वे सति ಎಂಬ ವಿಶೇಷಣವನ್ನು ಸೇರಿಸಲಾಗಿದೆ. ಅನ್ಯಥಾಸಿದ್ಧವೆಂದರೆ ಕಾರಣದ ಜೊತೆ ನಿಯತವಾಗಿ ಇರುವಂಥವು ಮತ್ತು ಕಾರ್ಯಕ್ಕೆ ಅನಿವಾರ್ಯವಲ್ಲದ ಕಾರಣಗಳು. ಈ ಮೂಲಕವಾಗಿ ದೀಪಿಕೆಯು ಘಟಕ್ಕೆ ಕುಂಭಕಾರನ ತಂದೆ, ದಂಡದಲ್ಲಿರುವ ದಂಡತ್ವ ಮೊದಲಾದವುಗಳನ್ನು ನಿವಾರಿಸುತ್ತದೆ. ಹೀಗೆ ಅನ್ಯಥಾಸಿದ್ಧವಲ್ಲದ ಕಾರ್ಯನಿಯತ ಪೂರ್ವವೃತ್ತಿಯಾಗಿರುವುದೇ ಕಾರಣ.

ಸಮವಾಯಿಕಾರಣವನ್ನು ಉಪಾದಾನಕಾರಣ ಎಂದೂ ಕರೆಯುತ್ತಾರೆ. ಇದು ಕಾರ್ಯವು ನಾಶವಾಗುವವರೆಗೂ ಅದರಲ್ಲಿ ಇರುತ್ತದೆ. ದ್ರವ್ಯವು ಮಾತ್ರ ಸಮವಾಯಿಕಾರಣವಾಗಬಲ್ಲದು.

ಕಾರ್ಯ ಮತ್ತು ಸಮವಾಯಿಕಾರಣಗಳ ನಡುವೆ ಸಂಬಂಧಸ್ಥಾಪಕವಾಗಿ ಅಸಮವಾಯಿ ಎಂಬ ಕಾರಣವನ್ನು ಅಂಗೀಕರಿಸುತ್ತಾರೆ. ಗುಣ ಅಥವಾ ಕರ್ಮಗಳು ಮಾತ್ರ ಅಸಮವಾಯಿಕಾರಣವಾಗಬಲ್ಲವು.

ಅಸಮವಾಯಿಕಾರಣದಲ್ಲಿ ಎರಡು ಪ್ರಕಾರಗಳಿವೆ:

1. कार्येण सह एकस्मिन् अर्थे समवेतं सत् कारणम्। ಎಂದರೆ ಕಾರ್ಯದೊಡನೆ ಒಂದು ಅಧಿಕರಣದಲ್ಲಿ ಸಮವಾಯಸಂಬಂಧದಿಂದ ಇದ್ದು ಕಾರ್ಯಕ್ಕೆ ಕಾರಣವಾಗಿರುವುದು. ಇದನ್ನು ಈ ಕೆಳಗಿನಂತೆ ಚಿತ್ರಿಸಬಹುದು:




2. कारणेन सह एकस्मिन् अर्थे समवेतं सत् कारणम्। ಅಂದರೆ ಸಮವಾಯಿಕಾರಣದೊಡನೆ ಒಂದು ಅಧಿಕರಣದಲ್ಲಿ ಸಮವಾಯಸಂಬಂಧದಿಂದ ಇದ್ದು ಕಾರ್ಯಕ್ಕೆ ಕಾರಣವಾಗಿರುವುದು. ಇದನ್ನು ಹೀಗೆ ಚಿತ್ರಿಸಬಹುದು:




ನಿಮಿತ್ತಕಾರಣವು ದ್ರವ್ಯ, ಗುಣ, ಕರ್ಮ ಇವುಗಳಲ್ಲಿ ಯಾವುದೂ ಆಗಬಹುದು. ಇವುಗಳಲ್ಲಿ ಸಮವಾಯಿ ಮತ್ತು ಅಸಮವಾಯಿಗಳು ಕಾರ್ಯದಿಂದ ಪ್ರತ್ಯೇಕಿಸಲಾಗದ ಕಾರಣಗಳಾದರೆ ನಿಮಿತ್ತಕಾರಣವನ್ನು ಕಾರ್ಯದಿಂದ ಪ್ರತ್ಯೇಕಿಸಬಹುದು.

ಕರಣದ ಲಕ್ಷಣದಲ್ಲಿ 'ಅಸಾಧಾರಣ' ಎಂಬ ಪದ ಸಾಧಾರಣಕಾರಣಗಳನ್ನು ವ್ಯಾವರ್ತನಗೊಳಿಸುತ್ತದೆಯಾದರೂ ಅತಿವ್ಯಾಪ್ತಿದೋಷದಿಂದ ಕೂಡಿದೆ. ಉದಾಹರಣೆಗಾಗಿ, ಘಟಕ್ಕೆ ದಂಡವು ಅಸಾಧಾರಣನಿಮಿತ್ತಕಾರಣವಾದರೂ ಅರಣ್ಯದಲ್ಲಿಯ ದಂಡ ಕಾರಣವಾಗಲಾರದು. ಅದನ್ನು ವ್ಯಾವರ್ತನಗೊಳಿಸುವುದಕ್ಕಾಗಿ 'ವ್ಯಾಪಾರವತ್' ಎಂಬ ವಿಶೇಷಣವನ್ನು ಲಕ್ಷಣದಲ್ಲಿ ಸೇರಿಸಬೇಕು.

'ವ್ಯಾಪಾರ' ಎಂದರೆ ದ್ರವ್ಯದಿಂದ ಭಿನ್ನವಾಗಿದ್ದು ತಾನು ಯಾವುದರಿಂದ ಜನಿಸುವುದೋ ಅದರಿಂದ ಜನ್ಯವಾದುದಕ್ಕೆ ತಾನು ಜನಕವಾಗಿರುವುದು. द्रव्येतरत्वे सति तज्जन्यत्वे सति तज्जन्यजनकत्वम्। ಉದಾಹರಣೆಗೆ, ವೃಕ್ಷಚ್ಛೇದನ ಎಂಬ ಕಾರ್ಯದಲ್ಲಿ ಪರಶುವೃಕ್ಷಸಂಯೋಗವು ವ್ಯಾಪಾರವಾಗಿದೆ. ಅದು ಪರಶುವಿನಿಂದ ಜನಿಸಿ ಪರಶುವಿನಿಂದಲೇ ಉಂಟಾಗುವ ವೃಕ್ಷಚ್ಛೇದನ

ಎಂಬ ಕಾರ್ಯಜನಕವಾಗಿದೆ. ಆದ್ದರಿಂದ ಕರಣದ ನಿಜವಾದ ಲಕ್ಷಣವು व्यापारवत् असाधारणं कारणम् ಎಂದಾಗುತ್ತದೆ.

31. ಪ್ರತ್ಯಕ್ಷ ಎಂಬ ಪದವು 'ಪ್ರತ್ಯಕ್ಷಜ್ಞಾನ' ಮತ್ತು 'ಜ್ಞಾನಸಾಧನ' ಎಂಬ ಅರ್ಥದ್ವಯಗಳಲ್ಲಿ ಪ್ರಯೋಗಿಸಲ್ಪಟ್ಟಿದ್ದು ಸಂದರ್ಭಾನುಗುಣವಾಗಿ ಅವುಗಳನ್ನು ಗ್ರಹಿಸಿಕೊಳ್ಳಬೇಕು.

ಲಕ್ಷಣದಲ್ಲಿ 'ಜ್ಞಾನ'ಪದವು ಸನ್ನಿಕರ್ಷಧ್ವಂಸದಲ್ಲಿ ಅತಿವ್ಯಾಪ್ತಿಯನ್ನು ನಿವಾರಿಸುತ್ತದೆ. ಸನ್ನಿಕರ್ಷಧ್ವಂಸವು ಇಂದ್ರಿಯಾರ್ಥಸನ್ನಿಕರ್ಷದಿಂದಲೇ ಜನಿಸಿದರೂ ಜ್ಞಾನವಲ್ಲ. ಅನುಮಿತ್ಯಾದಿಗಳಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ 'ಇಂದ್ರಿಯಾರ್ಥಸನ್ನಿಕರ್ಷಜನ್ಯಮ್' ಎಂಬ ಪದವಿದೆ. ಹೀಗಿದ್ದರೂ ಉಕ್ತಲಕ್ಷಣವು ಈಶ್ವರನಿಗಾಗುವ ಪ್ರತ್ಯಕ್ಷವನ್ನು ಒಳಗೊಳ್ಳದೇ ಅವ್ಯಾಪ್ತಿದೋಷಗ್ರಸ್ತವಾಗುತ್ತದೆ. ಆದ್ದರಿಂದ ज्ञानाकरणकं ज्ञानं प्रत्यक्षम् ಎಂಬ ಲಕ್ಷಣಾಂತರವನ್ನು ಆಶ್ರಯಿಸಲಾಗಿದೆ. ಯಾವ ಜ್ಞಾನಕ್ಕೆ ಬೇರೊಂದು ಜ್ಞಾನ ಕರಣವಾಗದೋ ಆ ಜ್ಞಾನವು ಪ್ರತ್ಯಕ್ಷ. ಈಶ್ವರನು ಸರ್ವಜ್ಞನಾದುದರಿಂದ ಮತ್ತು ಅವನ ಜ್ಞಾನವು ನಿತ್ಯವಾದುದರಿಂದ ಈಶ್ವರನಿಗಾಗುವ ಪ್ರತ್ಯಕ್ಷಜ್ಞಾನವು ಇಂದ್ರಿಯಾರ್ಥ-ಸನ್ನಿಕರ್ಷಜನ್ಯವಾದುದಲ್ಲ. ಹೀಗೆ ಅತಿವ್ಯಾಪ್ತಿದೋಷ ನಿವಾರಣೆಯಾಗುತ್ತದೆ. ಜೊತೆಗೆ ಈ ಲಕ್ಷಣವು ಅನುಮಿತಿ, ಉಪಮಿತಿ ಮತ್ತು ಶಾಬ್ದಜ್ಞಾನಗಳನ್ನು ವ್ಯಾವರ್ತನಗೊಳಿಸುತ್ತದೆ. ಏಕೆಂದರೆ ಈ ಮೂರು ಜ್ಞಾನಗಳಿಗೆ ಜ್ಞಾನಾಂತರದ ಆವಶ್ಯಕತೆ ಇದೆ. ಆದರೆ ಈ ಲಕ್ಷಣವು ಪ್ರತ್ಯಕ್ಷದ ಪ್ರಧಾನಭೇದವಾದ ಸವಿಕಲ್ಪಕಪ್ರತ್ಯಕ್ಷವನ್ನು ಒಳಗೊಳ್ಳದೇ ಅವ್ಯಾಪ್ತಿದೋಷದಿಂದ ಕೂಡಿದೆ. ಏಕೆಂದರೆ ಸವಿಕಲ್ಪಕಪ್ರತ್ಯಕ್ಷಕ್ಕೆ ನಿರ್ವಿಕಲ್ಪಕಪ್ರತ್ಯಕ್ಷ ಕರಣವಾಗಿರುತ್ತದೆ. ಆದ್ದರಿಂದ ತರ್ಕಸಂಗ್ರಹದ ಮೂಲಲಕ್ಷಣವೇ ಹೆಚ್ಚು ಸಾಧುವಾಗಿ ತೋರುತ್ತದೆ. ತರ್ಕಸಂಗ್ರಹಕಾರನಿಗೆ ಲೌಕಿಕಪ್ರತ್ಯಕ್ಷವೇ ಪ್ರಧಾನಲಕ್ಷ್ಯವಾದುದರಿಂದ ಅಲೌಕಿಕವಾದ ಈಶ್ವರಪ್ರತ್ಯಕ್ಷದಲ್ಲಿ ಅವ್ಯಾಪ್ತಿದೋಷಕ್ಕೆ ಅವಕಾಶವೂ ಇಲ್ಲ.

ಸವಿಕಲ್ಪಕಪ್ರತ್ಯಕ್ಷದ ಪೂರ್ವಭಾವಿ ಅವಸ್ಥೆಯಾಗಿ ತಾರ್ಕಿಕರು ನಿರ್ವಿಕಲ್ಪಕಪ್ರತ್ಯಕ್ಷವನ್ನು ಅಂಗೀಕರಿಸುತ್ತಾರೆ. ಪ್ರತ್ಯಕ್ಷದ ಪ್ರಥಮ ಅವಸ್ಥೆಯಲ್ಲಿ ಒಂದು ವಸ್ತುವಿನ ಸತ್ತಾ ಅಥವಾ ಭಾವರೂಪತೆ ಮಾತ್ರ ಗೃಹೀತವಾಗುತ್ತದೆ. ಇಲ್ಲಿ ಆ ವಸ್ತುವು ಇತರ ವಸ್ತುಜ್ಞಾನಗಳಿಂದ ವ್ಯಾವೃತ್ತವಾಗಿಲ್ಲ. ಈ ಅವಸ್ಥೆಯಲ್ಲಿ ಎದುರಿಗಿರುವ ವಸ್ತು ಮತ್ತು ಅದರ ಧರ್ಮ ಇವೆರಡರ ಸಂಬಂಧ ಪ್ರತ್ಯಕ್ಷವಾಗುವುದಿಲ್ಲ. ಆದ್ದರಿಂದ ನಿರ್ವಿಕಲ್ಪಕಪ್ರತ್ಯಕ್ಷವನ್ನು विशेषणविशेष्यसम्बन्धानवगाहिज्ञानम् ಎನ್ನುತ್ತಾರೆ.

ಒಂದು ವಸ್ತುವಿನ ಪ್ರತ್ಯಕ್ಷವಾಗಬೇಕಾದರೆ ಆ ವಸ್ತುವಿನ ಧರ್ಮದ ಜ್ಞಾನ ಅವಶ್ಯವಾಗುತ್ತದೆ. ಏಕೆಂದರೆ ವಿಶೇಷಣವನ್ನು ಗ್ರಹಿಸದ ಬುದ್ಧಿಯು ವಿಶೇಷ್ಯವನ್ನು ತಲುಪಲಾರದು— नागृहीतविशेषणा बुद्धिः विशेष्यमुपसङ्क्रामति। ಹೀಗೆ ಒಂದು ವಸ್ತುವಿನ ಪ್ರತ್ಯಕ್ಷದಲ್ಲಿ ಆ ವಸ್ತು ಹಾಗೂ ಅದರ ಧರ್ಮ ಇವುಗಳ ಸಂಬಂಧವನ್ನು ಗ್ರಹಿಸಿ ಆ ಧರ್ಮವೇ ಜ್ಞಾನದಲ್ಲಿ ಪ್ರಕಾರವಾಗಿ ತೋರುವುದೇ ಸವಿಕಲ್ಪಕ ಪ್ರತ್ಯಕ್ಷ. ಆದ್ದರಿಂದ ಸವಿಕಲ್ಪಕವನ್ನು नामजात्यादिविशेषणविशेष्यसम्बन्धावगाहिज्ञानम् ಎಂದು ವ್ಯಾಖ್ಯಾನಿಸಲಾಗಿದೆ. ಗ್ರಂಥದಲ್ಲಿ ನೀಡಿದ डित्थोऽयम् ಇತ್ಯಾದಿ ಉದಾಹರಣೆಗಳು ವಿಶೇಷಣ ಮತ್ತು ಪ್ರಕಾರಗಳಲ್ಲಿ ಕ್ರಮವಾಗಿ ಸಂಜ್ಞಾ, ಜಾತಿ, ಗುಣ, ಕ್ರಿಯೆಗಳೆಂಬ ನಾಲ್ಕು ವಿಧಗಳನ್ನು ಪ್ರತಿನಿಧಿಸುತ್ತವೆ.

ಇಂದ್ರಿಯಗಳು ತಮ್ಮ ಅರ್ಥಗಳ ಜೊತೆ ಆರು ವಿಧವಾಗಿ ಸಂಬಂಧ ಹೊಂದಲು ಸಾಧ್ಯ. ಇದನ್ನೇ ಷಡ್ವಿಧಸನ್ನಿಕರ್ಷ ಎಂದು ಕರೆಯುತ್ತಾರೆ. ಆರು ಇಂದ್ರಿಯಗಳಲ್ಲಿ ಚಕ್ಷು, ತ್ವಕ್ ಮತ್ತು ಮನಸ್ ಇವು ಮೂರು ದ್ರವ್ಯಗ್ರಾಹಕಗಳು ಮತ್ತು ಘ್ರಾಣ, ರಸನ ಹಾಗೂ ಶ್ರೋತ್ರಗಳು ಗುಣಗ್ರಾಹಕಗಳು ಆಗಿವೆ ಎಂದು ತರ್ಕಸಂಗ್ರಹದ ಟೀಕೆಯಲ್ಲಿ ಒಂದಾದ ನ್ಯಾಯಬೋಧಿನಿಯಲ್ಲಿ ವಿವರಿಸಲಾಗಿದೆ. ತಾರ್ಕಿಕರ ಪ್ರಕಾರ ಪ್ರತ್ಯಕ್ಷಜ್ಞಾನ ಉಂಟಾಗುವ ಕ್ರಮ ಹೀಗಿದೆ: ಮೊದಲು ಆತ್ಮನು ಮನಸ್ಸಿನೊಂದಿಗೆ ಸಂಬಂಧ ಹೊಂದುತ್ತಾನೆ. ಮನಸ್ಸು ಇಂದ್ರಿಯಗಳೊಡನೆ, ಇಂದ್ರಿಯಗಳು ಅರ್ಥಗಳೊಡನೆ ಸಂಬಂಧ ಹೊಂದುತ್ತವೆ. ಬಳಿಕ ಪ್ರತ್ಯಕ್ಷಜ್ಞಾನವುಂಟಾಗುತ್ತದೆ. आत्मा मनसा संयुज्यते, मन: इन्द्रियेण, इन्द्रियमर्थेन, ततः प्रत्यक्षम्।

ಷಡ್ವಿಧಸನ್ನಿಕರ್ಷಗಳಲ್ಲಿ ಆರನೆಯದಾದ ವಿಶೇಷಣ-ವಿಶೇಷ್ಯಭಾವವು ವಿವರಣೆಯನ್ನು ಅಪೇಕ್ಷಿಸುತ್ತದೆ. ಮೊದಲಿನ ಐದು ಸನ್ನಿಕರ್ಷಗಳಿಂದ ದ್ರವ್ಯ, ಗುಣ, ಕರ್ಮ ಮತ್ತು ಸಾಮಾನ್ಯ ಎಂಬ ನಾಲ್ಕು ಪದಾರ್ಥಗಳು ಗೃಹೀತವಾಗುತ್ತವೆ. ಕರ್ಮವು ಯಾವ ಸನ್ನಿಕರ್ಷದಿಂದ ಪ್ರತ್ಯಕ್ಷವಾಗುವುದೆಂದು ಗ್ರಂಥದಲ್ಲಿ ಉಕ್ತವಾಗಿಲ್ಲ. ಆದರೆ ಕರ್ಮವು ದ್ರವ್ಯಾಶ್ರಿತವಾದುದರಿಂದ, ದ್ರವ್ಯ ಮತ್ತು ಕರ್ಮಗಳ ನಡುವೆ ಸಮವಾಯಸಂಬಂಧವಿರುವುದರಿಂದ ಕರ್ಮಪ್ರತ್ಯಕ್ಷದಲ್ಲಿ ಸಂಯುಕ್ತಸಮವಾಯವು ಸನ್ನಿಕರ್ಷ- ವಾಗುತ್ತದೆ. ಐದನೆಯ ಪದಾರ್ಥವಾದ ವಿಶೇಷವು ಪರಮಾಣುಧರ್ಮವಾದುದರಿಂದ ಇಂದ್ರಿಯ ಪ್ರತ್ಯಕ್ಷವಲ್ಲ. ನೈಯಾಯಿಕರು ಸಮವಾಯವು ವಿಶೇಷಣ-ವಿಶೇಷ್ಯಭಾವಸನ್ನಿಕರ್ಷದಿಂದ ಪ್ರತ್ಯಕ್ಷ- ವಾಗುತ್ತದೆ ಎಂದು ಒಪ್ಪುತ್ತಾರೆ. ವಿಶೇಷಣ-ವಿಶೇಷ್ಯಭಾವಸನ್ನಿಕರ್ಷವನ್ನು ಅಭಾವಕ್ಕೆ ಮಾತ್ರ ಹೇಳಿದುದರಿಂದ ಸಮವಾಯವು ಇಂದ್ರಿಯಪ್ರತ್ಯಕ್ಷವಲ್ಲ ಎಂಬ ವೈಶೇಷಿಕರ ಅಭಿಪ್ರಾಯ ತರ್ಕಸಂಗ್ರಹಕಾರನಿಗೂ ಸಮ್ಮತವಾದುದು.

ಅಭಾವವು ಭಾವಭಿನ್ನಪದಾರ್ಥವಾದುದರಿಂದ ಸಂಯೋಗ ಅಥವಾ ಸಮವಾಯ ಸನ್ನಿಕರ್ಷಗಳಿಂದ ಗೃಹೀತವಾಗಲಾರದು. ಆದ್ದರಿಂದ ಅಭಾವಪ್ರತ್ಯಕ್ಷಕ್ಕೆ ವಿಶೇಷ್ಯ-ವಿಶೇಷಣಭಾವ ವೆಂಬ ಬೇರೆಯದೇ ಆದ ಸನ್ನಿಕರ್ಷವನ್ನು ಕಲ್ಪಿಸಲಾಗಿದೆ. ಉದಾಹರಣೆಗೆ, ಭೂತಲದಲ್ಲಿರುವ ಘಟವು ಸಂಯೋಗಸನ್ನಿಕರ್ಷದಿಂದ ಪ್ರತ್ಯಕ್ಷವಾಗುತ್ತದೆ. ಅದೇ ಭೂತಲದಲ್ಲಿರುವ ಘಟಾಭಾವವೂ ಭೂತಲದ ಮೂಲಕವೇ ಪ್ರತ್ಯಕ್ಷವಾಗುತ್ತದೆ. ಹೀಗೆ ಭೂತಲದಲ್ಲಿರುವ ಘಟಾಭಾವವು ಚಕ್ಷುರಿಂದ್ರಿಯ ಮತ್ತು ಭೂತಲಗಳ ನಡುವಿನ ಸಂಯೋಗದ ಜೊತೆಗೆ ಭೂತಲ ಮತ್ತು ಘಟಾಭಾವಗಳ ನಡುವಿನ ವಿಶೇಷಣ-ವಿಶೇಷ್ಯಭಾವದಿಂದ ಪ್ರತ್ಯಕ್ಷವಾಗುತ್ತದೆ. ಈ ಸನ್ನಿಕರ್ಷವು ವಿಶೇಷಣತಾಸನ್ನಿಕರ್ಷ ಮತ್ತು ವಿಶೇಷ್ಯತಾಸನ್ನಿಕರ್ಷವೆಂದು ಎರಡು ವಿಧವಾಗಿರುತ್ತದೆ. घटाभाववत् भूतलम् ಎಂಬಲ್ಲಿ ಘಟಾಭಾವವು ವಿಶೇಷಣವಾಗಿಯೂ भूतले घटाभाव: ಎನ್ನುವಲ್ಲಿ ಘಟಾಭಾವವು ವಿಶೇಷ್ಯವಾಗಿಯೂ ಪ್ರತ್ಯಕ್ಷವಾಗುತ್ತದೆ.

ಇವೆರಡು ಪ್ರಯೋಗಗಳೂ ಒಂದೇ ಅರ್ಥವನ್ನು ಬೋಧಿಸಿದರೂ ಈ ಪ್ರಯೋಗಗಳಲ್ಲಿಯ ಭಾಷಾಭಿನ್ನತೆಯಿಂದ ಜ್ಞಾನದಲ್ಲಿಯೂ ಸೂಕ್ಷ್ಮವಾದ ವ್ಯತ್ಯಾಸವಾಗುತ್ತದೆ. ಮೊದಲನೆಯ ಪ್ರಯೋಗದಲ್ಲಿ ಭೂತಲಕ್ಕೆ ಪ್ರಾಧಾನ್ಯವಿದ್ದರೆ ಎರಡನೆಯ ಪ್ರಯೋಗದಲ್ಲಿ ಘಟಾಭಾವಕ್ಕೆ ಪ್ರಾಧಾನ್ಯವಿದೆ.

ಇಲ್ಲಿ ಪ್ರತ್ಯಭಿಜ್ಞಾ, ಸ್ಮೃತಿ ಹಾಗೂ ಅಭಾವ ಇವುಗಳ ಪರಸ್ಪರವ್ಯತ್ಯಾಸವನ್ನು ತಿಳಿಯುವು- ದೊಳಿತು.

ಪ್ರತ್ಯಭಿಜ್ಞೆಯಲ್ಲಿ ಈಗ ಪ್ರತ್ಯಕ್ಷವಾದ ವ್ಯಕ್ತಿಯು ಪೂರ್ವಪ್ರತ್ಯಕ್ಷವಾದ ವ್ಯಕ್ತಿಯೇ ಎಂಬ ಅಭೇದಜ್ಞಾನವಿರುತ್ತದೆ. ಸ್ಮೃತಿಯಲ್ಲಿ ಪೂರ್ವಪ್ರತ್ಯಕ್ಷವ್ಯಕ್ತಿಯು ಈಗ ಪ್ರತ್ಯಕ್ಷವಾಗಿರುವುದಿಲ್ಲ. ಪ್ರತ್ಯಭಿಜ್ಞಾ ಸ್ಮೃತಿಗಳು ಹಾಗೂ ಅಭಾವ ಇವುಗಳ ನಡುವಿನ ವ್ಯತ್ಯಾಸವನ್ನು ಗ್ರಹಿಸುವ ಮುನ್ನ ಅಭಾವದ ಸ್ವರೂಪವನ್ನು ಇನ್ನೊಮ್ಮೆ ವಿಶದಪಡಿಸಿಕೊಳ್ಳುವುದು ಅಪೇಕ್ಷಣೀಯ. ಅಭಾವದ ವಿಭಾಗಗಳು ತುಂಬ ವಿಭಿನ್ನ ಸ್ವರೂಪದವುಗಳಾದ್ದರಿಂದ ಅಭಾವಕ್ಕೆ ಸಾಮಾನ್ಯವ್ಯಾಖ್ಯೆಯನ್ನು ತಾರ್ಕಿಕಗ್ರಂಥಗಳಲ್ಲಿ ನೀಡಲಾಗಿಲ್ಲ. भावभिन्न: पदार्थ: ಎಂಬುದಾಗಲಿ प्रतियोगिज्ञानाधीनज्ञान- विषयत्वम् ಎಂಬುದಾಗಲಿ ಶಾಬ್ದಿಕವ್ಯಾಖ್ಯೆಗಳು ಮಾತ್ರ. ಅಭಾವದ ಒಂದು ಪ್ರಕಾರವಾದ ಪ್ರಾಗಭಾವದಲ್ಲಿ ಉತ್ಪನ್ನವ್ಯಕ್ತಿಯನ್ನು ಗ್ರಹಿಸಿದ ಬಳಿಕವಷ್ಟೇ ಆ ವ್ಯಕ್ತಿಯ ಅಭಾವ ಆ ಪೂರ್ವದಲ್ಲಿತ್ತು ಎಂದು ಗ್ರಹಿಸಲು ಸಾಧ್ಯ. ಉತ್ಪನ್ನವೇ ಆಗದ ವ್ಯಕ್ತಿಯ ಅಭಾವವನ್ನೂ ಗ್ರಹಿಸುವುದು ಅಸಾಧ್ಯ. ಇನ್ನು ಅಭಾವವು ಯಾವುದಾದರೊಂದು ಅಧಿಕರಣವನ್ನು ಆಶ್ರಯಿಸಿಯೇ ಗ್ರಹಿಸಲ್ಪಡುತ್ತದೆ. ಯಾವ ವ್ಯಕ್ತಿಯ ಅಭಾವವನ್ನು ಗ್ರಹಿಸುತ್ತೇವೆಯೋ ಆ ವ್ಯಕ್ತಿ ನಮ್ಮ ಸ್ಮೃತಿಯಲ್ಲಿ ಭಾವನಾ ಎಂಬ ಸಂಸ್ಕಾರದ ರೂಪದಲ್ಲಿ ಜಾಗರಿತವಾಗಿರುತ್ತದೆ. ಬಾಹ್ಯದಲ್ಲಿ ಯಾವ ಅಧಿಕರಣದಲ್ಲಿ ಆ ವ್ಯಕ್ತಿಯ ಅಭಾವವನ್ನು ಗ್ರಹಿಸುತ್ತೇವೆಯೋ ಆ ವ್ಯಕ್ತಿ ವಾಸ್ತವವಾಗಿ ಇರುವುದಿಲ್ಲ. ಆದ್ದರಿಂದ ಅಭಾವವಿರುವ ವ್ಯಕ್ತಿಗೂ (ಪ್ರತಿಯೋಗಿಗೂ) ಅಭಾವವನ್ನು ಎಲ್ಲಿ ಗ್ರಹಿಸುವೆವೋ ಆ ಅಧಿಕರಣಕ್ಕೂ (ಅನುಯೋಗಿಗೂ) ವಾಸ್ತವಸಂಬಂಧ ಸ್ಥಾಪಿತವಾಗಿರುವುದಿಲ್ಲ. ಎಂದರೆ ನಮ್ಮ ಸ್ಮೃತಿಯಲ್ಲಿರುವ ಪ್ರತಿಯೋಗಿಯು ಬಾಹ್ಯ ಅಧಿಕರಣದಲ್ಲಿ ಪ್ರತ್ಯಕ್ಷವಾಗದಿರುವುದರಿಂದ ಪ್ರತ್ಯಕ್ಷವಾದ ಬಾಹ್ಯ ಅಧಿಕರಣದಲ್ಲಿ ಸ್ಮೃತಿ- ರೂಪದ ಪ್ರತಿಯೋಗಿಯ ಇಲ್ಲದಿರುವಿಕೆಯೇ ಅಭಾವ ಎಂದಾಗುತ್ತದೆ. ಇನ್ನು ಸ್ಮೃತಿಯಲ್ಲಿಯೂ ವ್ಯಕ್ತಿಯ ವಾಸ್ತವ ಅಭಾವವಿರುವಂತೆ ತೋರುವುದರಿಂದ ಸ್ಮೃತಿಗೂ ಅಭಾವಕ್ಕೂ ವ್ಯತ್ಯಾಸವೇನು? ಎಂಬುದಕ್ಕೆ ಉತ್ತರವಿಷ್ಟೆ: ಸ್ಮೃತಿಯಲ್ಲಿ ಯಾವ ಭಾವನಾಖ್ಯಸಂಸ್ಕಾರ ಜಾಗರಿತವಾಗುವುದೋ ಆ ವ್ಯಕ್ತಿಗೆ ಪ್ರತ್ಯಕ್ಷ ಅಧಿಕರಣವಾವುದೂ ಆಶ್ರಯವಾಗಿರುವುದಿಲ್ಲ.

ಉದಾಹರಣೆಗೆ, ಹೂದೋಟಕ್ಕೆ ತೊಂಡು ಹಸುವೊಂದು ನುಗ್ಗಿದರೆ ಅದನ್ನು ಕಂಡಾಗ ಉಂಟಾಗುವುದು ಪ್ರತ್ಯಕ್ಷಾನುಭವ. ಮರುದಿನ ಅದೇ ಹಸು ಮತ್ತೆ ಬಂದರೆ 'ನಿನ್ನೆ ಬಂದ ಹಸುವೇ ಇದು' ಎಂದು ಗುರುತಿಸುವುದು ಪ್ರತ್ಯಭಿಜ್ಞಾ. ಈ ವೃತ್ತಾಂತವನ್ನು ಅನ್ಯರಿಗೆ ನಿವೇದಿಸುವಾಗ ಹಸುವು ನಮ್ಮೆದುರು ಇಲ್ಲದಿದ್ದರೂ ಅದರ ಸಂಸ್ಕಾರ ನಮ್ಮಲ್ಲಿರುತ್ತದೆ. ಈ ಸಂಸ್ಕಾರಕ್ಕೆ 'ಭಾವನಾ' ಎಂದು ಹೆಸರು. ಈ ಭಾವನಾಸಂಸ್ಕಾರದಿಂದ ಜನಿಸುವ ಹಸುವಿನ ಜ್ಞಾನವೇ ಸ್ಮೃತಿ. ಮತ್ತೆ ಮರುದಿನ ಹೂದೋಟಕ್ಕೆ ಹಸು ಬಾರದಿದ್ದಾಗ 'ಇಂದು ಹಸು ಹೂದೋಟದಲ್ಲಿ ಇಲ್ಲ' ಎಂಬುದು ಅಭಾವಜ್ಞಾನ. ಇಲ್ಲಿ ಹೂದೋಟ ಅಧಿಕರಣ. ಯಾವುದರ ಅಭಾವವನ್ನು ಹೇಳುವೆವೋ ಆ ಹಸುವೇ ಪ್ರತಿಯೋಗಿ. ಹೂದೋಟವನ್ನು ಕಂಡಾಗ ಹಸುವಿನ ನೆನಪು ಜಾಗರಿತವಾಗುವುದು. ಜಾಗರಿತವಾದ ಸ್ಮೃತಿರೂಪದ ಹಸು ಹೂದೋಟದಲ್ಲಿ ಪ್ರತ್ಯಕ್ಷವಾಗದಿರುವುದರಿಂದ ಪ್ರತ್ಯಕ್ಷವಾದ ಹೂದೋಟದಲ್ಲಿ ಸ್ಮೃತಿರೂಪದ ಹಸುವಿನ ಇಲ್ಲದಿರುವಿಕೆಯೇ ಅಭಾವ.

ಅಭಾವವು ವಿಶೇಷಣ-ವಿಶೇಷ್ಯಭಾವ ಎಂಬ ಸನ್ನಿಕರ್ಷದಿಂದ ಪ್ರತ್ಯಕ್ಷವಾಗುತ್ತದೆ ಎಂಬುದು ತಾರ್ಕಿಕರ ಅಭಿಪ್ರಾಯವಾಗಿದೆ. ಆದರೆ "ಅನುಪಲಬ್ಧಿ" ಎಂಬ ಪ್ರಮಾಣವನ್ನು ಅಂಗೀಕರಿಸದಿದ್ದರೆ ಅಭಾವಜ್ಞಾನವು ಬಾಧಿತವಾಗುತ್ತದೆ ಎಂದು ಮೀಮಾಂಸಕರು ವಾದಿಸುತ್ತಾರೆ. ಉದಾಹರಣೆಗೆ, ಕತ್ತಲೆಯಲ್ಲಿ ಘಟವಿದ್ದೂ ಕಾಣಿಸದಿರುವಾಗ 'ಇಲ್ಲಿ ಘಟವಿದ್ದರೆ ಕಾಣಬೇಕಿತ್ತು, ಕಾಣುತ್ತಿಲ್ಲ; ಆದ್ದರಿಂದ ಘಟವಿಲ್ಲ' ( यदि स्यादुपलभ्येत, नोपलभ्यते, अतो नास्ति ) ಎಂಬಲ್ಲಿ ಘಟವಿದ್ದೂ ಘಟಾಭಾವವನ್ನು ಹೇಳುವ ಅನಿವಾರ್ಯತೆ ಉಂಟಾಗುತ್ತದೆ. ಆದರೆ ಈ ಆಪಾದನೆಗೆ ಅವಕಾಶವಿಲ್ಲ. ಏಕೆಂದರೆ ಅಲ್ಲಿ ಆಲೋಕಸಂಯೋಗ (ಬೆಳಕಿನ ಸಂಬಂಧ) ಎಂಬ ಯೋಗ್ಯಾನುಪಲಬ್ಧಿ ಇಲ್ಲದಿರುವುದರಿಂದ ಘಟದ ಭಾವವಾಗಲಿ ಅಥವಾ ಅಭಾವವಾಗಲಿ ಪ್ರತ್ಯಕ್ಷವಾಗುವುದಿಲ್ಲ.

ನೈಯಾಯಿಕರ ಹಾಗೂ ಮೀಮಾಂಸಕರ ಈ ವಾದ-ಪ್ರತಿವಾದಗಳನ್ನು ಪರಾಮರ್ಶಿಸಿದಾಗ ಸ್ಪಷ್ಟವಾಗುವ ಅಂಶವೆಂದರೆ ಅಭಾವವು ಪ್ರತ್ಯಕ್ಷಪ್ರಮಾಣದಲ್ಲಿಯ ನಿರ್ದಿಷ್ಟಸನ್ನಿಕರ್ಷದಿಂದ ಗ್ರಾಹ್ಯವಾಗುವುದೆಂದು ನೈಯಾಯಿಕರು ವಾದಿಸಿದರೆ ಮೀಮಾಂಸಕರು ಅನುಪಲಬ್ಧಿಯೆಂಬ ಪ್ರತ್ಯಕ್ಷಪ್ರಮಾಣವನ್ನೇ ಅಂಗೀಕರಿಸುತ್ತಾರೆ. ಆದರೆ ನೈಯಾಯಿಕರು ಅನುಪಲಬ್ಧಿಯನ್ನು ಪ್ರತ್ಯಕ್ಷಪ್ರಮಾಣವೆಂದಷ್ಟೇ ಅಂಗೀಕರಿಸುವುದಿಲ್ಲವೇ ಹೊರತು ಅನುಪಲಬ್ಧಿಯನ್ನೇ ಪೂರ್ಣವಾಗಿ ತಿರಸ್ಕರಿಸುವುದಿಲ್ಲ. ಅನುಪಲಬ್ಧಿಯು ಅಭಾವಪ್ರತ್ಯಕ್ಷಕ್ಕೆ ಪೂರ್ವಸಹಕಾರಿ ಅಂಶ ಎಂದು ನೈಯಾಯಿಕರು ಒಪ್ಪುತ್ತಾರೆ. ವಿಶೇಷಣ-ವಿಶೇಷ್ಯಭಾವಸನ್ನಿಕರ್ಷ ಹಾಗೂ ಯೋಗ್ಯಾನುಪಲಬ್ಧಿ ಎಂಬ ಎರಡು ಘಟಕಗಳನ್ನು ಅಭಾವಪ್ರತ್ಯಕ್ಷದಲ್ಲಿ ನೈಯಾಯಿಕರು ಅಂಗೀಕರಿಸುತ್ತಾರೆ. ಮೀಮಾಂಸಕರು ಅನುಪಲಬ್ಧಿ ಎಂಬ ಪ್ರತ್ಯೇಕಪ್ರಮಾಣವನ್ನು ಒಪ್ಪುತ್ತಾರೆ. ದೀಪಿಕೆಯ ಪ್ರಕಾರ ನೈಯಾಯಿಕರ ವಾದವೇ ಅಧಿಕ ಲಾಘವ(ಅಭಾವಗ್ರಹಣೆಗೆ ಸರಳವಿಧಾನ)ದಿಂದ ಕೂಡಿದೆ. ಏಕೆಂದರೆ ಒಂದು ಪ್ರತ್ಯೇಕಪ್ರಮಾಣವನ್ನೇ ಕಲ್ಪಿಸುವುದಕ್ಕಿಂತ ಎರಡು ವ್ಯಾಪಾರಗಳನ್ನು (ಸನ್ನಿಕರ್ಷ ಹಾಗೂ ಅನುಪಲಬ್ಧಿ) ನಿರ್ವಹಿಸುವುದು ಸುಲಭ.

32. ಪ್ರಮಾಣಗಳಲ್ಲಿ ಪ್ರತ್ಯಕ್ಷದ ಬಳಿಕ ಬಲಶಾಲಿಯಾದ ಪ್ರಮಾಣವೆಂದರೆ ಅನುಮಾನ. ಚಾರ್ವಾಕ ದರ್ಶನವನ್ನು ಹೊರತುಪಡಿಸಿ ಉಳಿದೆಲ್ಲ ದರ್ಶನಗಳಿಗೂ ಸಮ್ಮತವಾದ ಅನುಮಾನಪ್ರಮಾಣವು ತಾರ್ಕಿಕದರ್ಶನದಲ್ಲಿ ವಿಶೇಷವಾದ ಸ್ಥಾನವನ್ನು ಪಡೆದಿದೆ. (प्रत्यक्षपरिकल्पितमप्यर्थम् अनुमानेन बुभुत्सन्ते तर्करसिकाः). ಅನುಮಾನಕ್ಕೆ ಇಷ್ಟೊಂದು ಮಹತ್ವ ದೊರೆತಿರುವುದಕ್ಕೆ ಕಾರಣವಿದೆ. ಇದು ಪ್ರತ್ಯಕ್ಷಸಹಕೃತವಾದುದಾದರೂ ಅನೇಕ ಸಂದರ್ಭಗಳಲ್ಲಿ ಅಪ್ರತ್ಯಕ್ಷವಾದುದನ್ನು ಸಾಧಿಸುವ ಸಾಮರ್ಥ್ಯವನ್ನು ಹೊಂದಿದೆ. ಜೊತೆಗೆ ಉಪಮಾನ ಮತ್ತು ಶಬ್ದಗಳೆಂಬ ಉಳಿದ ಪ್ರಮಾಣದ್ವಯವೂ ಅನುಮಾನವನ್ನೇ ಆಧರಿಸಿದೆ.

ಸಾಮಾನ್ಯವಾಗಿ ಅನುಮಾನವನ್ನು ಹೀಗೆ ವಿವರಿಸಬಹುದು: ಪ್ರತ್ಯಕ್ಷವಸ್ತುವಿನಲ್ಲಿರುವ ಒಂದು ಸೂಚಕಾಂಶವು ಅಪ್ರತ್ಯಕ್ಷವಾದ ಬೇರೊಂದರೊಡನೆ ನಿಯತಸಂಬಂಧವನ್ನು ಹೊಂದಿದೆ ಎಂಬ ಅರಿವಿನ ಮೂಲಕ ಆ ಪ್ರತ್ಯಕ್ಷವಸ್ತುವಿನಲ್ಲಿ ಅಪ್ರತ್ಯಕ್ಷವಾದ ಬೇರೊಂದನ್ನು ಸಾಧಿಸುವಿಕೆಯೇ ಅನುಮಾನ. ಉದಾಹರಣೆಗೆ, ದೇವದತ್ತ ಎಂದೊಬ್ಬನನ್ನು ನೋಡುತ್ತೇವೆ. ಅವನಲ್ಲಿ ಮನುಷ್ಯತ್ವ

ಎಂಬ ಅಂಶವಿದೆ. ಇದು ಅಪ್ರತ್ಯಕ್ಷವಾದ ಮರ್ತ್ಯತ್ವ ಎಂಬುದರೊಡನೆ ನಿಯತಸಂಬಂಧವನ್ನು ಹೊಂದಿದೆ. ಈ ಸಂಬಂಧಜ್ಞಾನದಿಂದ ದೇವದತ್ತನಲ್ಲಿ ಕಾಣದಿರುವ ಮರ್ತ್ಯತ್ವವನ್ನು ಸಾಧಿಸುತ್ತೇವೆ. ತನ್ಮೂಲಕ ದೇವದತ್ತ ಮರ್ತ್ಯ ಎಂದು ಸಿದ್ಧವಾಗುತ್ತದೆ.

ಇಂತಹ ಒಂದು ನಿರ್ಣಯಕ್ಕೆ ಬರುವಾಗ ನಾವು ಒಂದು ನಿರ್ದಿಷ್ಟಕ್ರಮವನ್ನು ಅನುಸರಿಸುತ್ತೇವೆ. ಲೋಕದಲ್ಲಿ ಜನಿಸಿದ ಅನೇಕ ಮನುಷ್ಯರು ಸಾಯುವುದನ್ನು ನೋಡಿ 'ಮನುಷ್ಯರೆಲ್ಲರೂ ಸಾಯುತ್ತಾರೆ' ಎಂಬ ತೀರ್ಮಾನಕ್ಕೆ ಬಂದಿರುತ್ತೇವೆ. ಬಳಿಕ ಎದುರಿಗಿರುವ ಮನುಷ್ಯನೊಬ್ಬನನ್ನು ನೋಡಿ ಇವನು ಮರಣಶೀಲನೋ ಅಲ್ಲವೋ ಎಂಬ ಸಂದೇಹವುಂಟಾದರೆ ಈ ಮೊದಲು ಗ್ರಹಿಸಿದ ತೀರ್ಮಾನವನ್ನು ಇವನಲ್ಲಿಯೂ ಅನ್ವಯಿಸುತ್ತೇವೆ. ಅನಂತರ ಈ ಮನುಷ್ಯನೂ ಮರಣಶೀಲನು ಎಂಬ ನಿಶ್ಚಯವುಂಟಾಗುತ್ತದೆ. ಹೀಗೆ ಅನೇಕ ಉದಾಹರಣೆಗಳಿಂದ ಒಂದು ಸಾಮಾನ್ಯನಿಯಮವನ್ನು ಗ್ರಹಿಸಿ ವಿಶೇಷಸ್ಥಾನವೊಂದರಲ್ಲಿ ಆ ಸಾಮಾನ್ಯನಿಯಮವನ್ನು ಅನ್ವಯಿಸಿ ಖಚಿತತೀರ್ಮಾನವೊಂದಕ್ಕೆ ತಲುಪುವುದೇ ಅನುಮಿತಿಯ ಪ್ರಕ್ರಿಯೆ. ಈ ರೀತಿಯಲ್ಲಿ ವಿಶೇಷಗಳಿಂದ ಸಾಮಾನ್ಯನಿಯಮವೊಂದನ್ನು ಗ್ರಹಿಸುವಿಕೆ, ವಿಶೇಷವೊಂದರಲ್ಲಿ ಆ ಸಾಮಾನ್ಯನಿಯಮದ ಅನ್ವಯ, ಆ ವಿಶೇಷದಲ್ಲಿ ಒಂದು ನಿರ್ಣಯಾತ್ಮಕವಾದ ಜ್ಞಾನ—ಇದು ಅನುಮಿತಿಯ ಕ್ರಮ.

ಅನುಮಾನದ ವಿವರಣೆಗೆ ಆವಶ್ಯಕವಾದ ಪಾರಿಭಾಷಿಕಪದಗಳನ್ನು ಗ್ರಂಥಕಾರನು ಅಲ್ಲಲ್ಲಿ ನೀಡುತ್ತಾನೆ. ಆದರೆ ಪ್ರಕರಣವನ್ನು ಪ್ರವೇಶಿಸುವ ಪೂರ್ವದಲ್ಲಿಯೇ ಅವುಗಳ ಜ್ಞಾನ ಜಿಜ್ಞಾಸುವಿಗೆ ಅಗತ್ಯವಾದುದರಿಂದ ಪಾರಿಭಾಷಿಕಪದಗಳ ಅರ್ಥವನ್ನು ಇಲ್ಲಿಯೇ ವಿವರಿಸಲಾಗಿದೆ.

**ಸಾಧ್ಯ**—यत् साध्यते तत् साध्यम्। ಯಾವುದು ಸಾಧಿಸಲ್ಪಡುತ್ತದೆಯೋ ಅದು ಸಾಧ್ಯ. पर्वतो वह्निमान्, धूमात्। ಎಂಬಲ್ಲಿ ಸಾಧಿಸಲ್ಪಡಬೇಕಾದುದು 'ವಹ್ನಿ'. ಆದ್ದರಿಂದ ಅದು ಸಾಧ್ಯ. ಇದಕ್ಕೆ 'ವ್ಯಾಪಕ' ಎಂದೂ ಹೆಸರಿದೆ.

**ಹೇತು**—येन साध्यते सः हेतुः। ಯಾವುದರಿಂದ ಸಾಧಿಸಲ್ಪಡುತ್ತದೆಯೋ ಅದು ಹೇತು. ಮೇಲಿನ ಉದಾಹರಣೆಯಲ್ಲಿ ಸಾಧ್ಯವಾದ ವಹ್ನಿಯು ಧೂಮ ಎಂಬುದರಿಂದ ಸಾಧಿಸಲ್ಪಡುತ್ತದೆ. ಆದ್ದರಿಂದ 'ಧೂಮ' ಹೇತುವಾಗಿದೆ. ಇದನ್ನು ವ್ಯಾಪ್ಯ, ಸಾಧನ, ಗಮಕ, ಲಿಂಗ ಎಂದೂ ಕರೆಯುತ್ತಾರೆ.

**ಪಕ್ಷ**—यस्मिन् साध्यते सः पक्षः। ಯಾವುದರಲ್ಲಿ ಸಾಧ್ಯವು ಸಾಧಿಸಲ್ಪಡುತ್ತದೆಯೋ ಅದು ಪಕ್ಷ. ಉಕ್ತ ಉದಾಹರಣೆಯಲ್ಲಿ ಸಾಧ್ಯವಾದ ವಹ್ನಿಯು ಪರ್ವತದಲ್ಲಿ ಸಾಧಿಸಲ್ಪಡುತ್ತದೆ. ಆದ್ದರಿಂದ ಅನುಮಾನಕ್ಕೆ ಆಲಂಬನವಾದ 'ಪರ್ವತ' ಪಕ್ಷ. ಗ್ರಂಥದಲ್ಲಿ ಇದನ್ನು सन्दिग्धसाध्यवान् ಎಂದು ಲಕ್ಷಿಸಲಾಗಿದೆ. ಸಾಧಿಸಲ್ಪಡಬೇಕಾದುದರ ಸಂದೇಹವು ಯಾವುದರಲ್ಲಿ ತೋರುವುದೋ ಅದೇ ಪಕ್ಷ.

ವ್ಯಾಪ್ತಿ—ಹೇತು ಮತ್ತು ಸಾಧ್ಯಗಳ ನಿಯತವಾದ ಸಂಬಂಧವೇ ವ್ಯಾಪ್ತಿ. यत्र यत्र धूमः तत्र तत्र वह्निः ಎಂಬುದರಿಂದ ಗೃಹೀತವಾಗುವ ಧೂಮ-ಅಗ್ನಿಗಳ ನಿಯತವಾದ ಸಾಹಚರ್ಯ ಸಂಬಂಧವೇ ವ್ಯಾಪ್ತಿ. ಹೇತು ಮತ್ತು ಸಾಧ್ಯಗಳು ಯಾವಾಗಲೂ ಒಂದೇ ಅಧಿಕರಣದಲ್ಲಿರುತ್ತವೆ. ಹಾಗೆಂದಮಾತ್ರಕ್ಕೆ ಅಗ್ನಿ ಇದ್ದಲ್ಲೆಲ್ಲ ಧೂಮವಿರುತ್ತದೆ ಎನ್ನಲಾಗುವುದಿಲ್ಲ, ಎಂದರೆ ಧೂಮವು ಅಗ್ನಿಯ ಜೊತೆ

ನಿಯತಸಾಹಚರ್ಯಸಂಬಂಧವನ್ನು ಹೊಂದಿದೆಯೇ ಹೊರತು ಅಗ್ನಿ ಧೂಮದ ಜೊತೆ ಅಲ್ಲ. ಉದಾಹರಣೆಗೆ, ಕಾಯಿಸುವಿಕೆಯಿಂದ ಕೆಂಪಾದ ಕಬ್ಬಿಣದಲ್ಲಿ (ತಪ್ತ ಅಯೋಗೋಲಕ) ಅಗ್ನಿ ಇದ್ದರೂ ಧೂಮವಿಲ್ಲ. ಆದ್ದರಿಂದ ಎಲ್ಲೆಲ್ಲಿ ಧೂಮವೋ ಅಲ್ಲಲ್ಲಿ ಅಗ್ನಿ ಎನ್ನಬೇಕೇ ಹೊರತು ಎಲ್ಲೆಲ್ಲಿ ಅಗ್ನಿಯೋ ಅಲ್ಲೆಲ್ಲ ಧೂಮ ಎನ್ನಬಾರದು. ಏಕೆಂದರೆ ಹೇತುವು ವ್ಯಾಪ್ಯವೂ (ಅಲ್ಪದೇಶವೃತ್ತಿ) ಸಾಧ್ಯವು ವ್ಯಾಪಕವೂ (ಅಧಿಕದೇಶವೃತ್ತಿ) ಆಗಿರುತ್ತದೆ.

**ಸಪಕ್ಷ**—ಯಾವುದರಲ್ಲಿ ಸಾಧ್ಯವು ನಿಶ್ಚಿತವಾಗಿರುವುದೋ ಅದು ಸಪಕ್ಷ. ಉಕ್ತ ಅನುಮಾನದಲ್ಲಿ ಸಾಧ್ಯವಾದ ಅಗ್ನಿಯು ಅಡುಗೆಮನೆ (ಮಹಾನಸ) ಮುಂತಾದವುಗಳಲ್ಲಿ ನಿಶ್ಚಿತವಾದುದರಿಂದ ಮಹಾನಸ ಮುಂತಾದವು ಸಪಕ್ಷ.

**ವಿಪಕ್ಷ**—ಯಾವುದರಲ್ಲಿ ಸಾಧ್ಯದ ಅಭಾವವು ನಿಶ್ಚಿತವಾಗಿರುವುದೋ ಅದು ವಿಪಕ್ಷ. ಸಾಧ್ಯವಾದ ಅಗ್ನಿಯ ಅಭಾವವು ಹ್ರದ(ಕೊಳ)ದಲ್ಲಿ ನಿಶ್ಚಿತವಾದುದರಿಂದ ಹ್ರದ ವಿಪಕ್ಷ.

**ಪರಾಮರ್ಶ**—ಹೇತು ಮತ್ತು ಸಾಧ್ಯಗಳ ನಡುವೆ ಇರುವ ಸಾಹಚರ್ಯಸಂಬಂಧವಿಶಿಷ್ಟವಾದ ಹೇತುವು ಪಕ್ಷದಲ್ಲಿದೆ ಎಂಬ ಜ್ಞಾನವೇ ಪರಾಮರ್ಶ. ಉಕ್ತ ಉದಾಹರಣೆಯಲ್ಲಿ ಧೂಮಾಗ್ನಿಗಳ ನಡುವೆ ಇರುವ ನಿಯತಸಾಹಚರ್ಯಸಂಬಂಧವಿಶಿಷ್ಟವಾದ ಧೂಮವು ಪರ್ವತದಲ್ಲಿದೆ ಎಂಬ ಜ್ಞಾನ ಪರಾಮರ್ಶ. ಹೇತುವು ಪಕ್ಷದ ಧರ್ಮವಾಗಿದೆ ಮತ್ತು ವ್ಯಾಪ್ತಿವಿಶಿಷ್ಟವಾಗಿದೆ ಎಂಬ ಎರಡು ಪ್ರತ್ಯೇಕಜ್ಞಾನಗಳು ಸೇರಿ ಪರಾಮರ್ಶವಾಗುತ್ತದೆ.

**ಪಕ್ಷಧರ್ಮತಾ**—ಪಕ್ಷದಲ್ಲಿ ಹೇತುವಿನ ಇರುವಿಕೆಯೇ ಪಕ್ಷಧರ್ಮತೆ. ಪಕ್ಷವಾದ ಪರ್ವತದಲ್ಲಿ ಹೇತುವಾದ ಧೂಮದ ಇರುವಿಕೆಯೇ ಪಕ್ಷಧರ್ಮತೆ.

मितेन लिङ्गेन अर्थस्य पश्चान्मानम् ಎಂದು ಅನುಮಾನದ ನಿರ್ವಚನವಿದೆ. ಗೃಹೀತವಾದ ಹೇತುವಿನಿಂದ ಸಾಧ್ಯವನ್ನು ನಿರ್ಧರಿಸುವುದೇ ಅನುಮಾನ. ಇದನ್ನು लिङ्गलिङ्गिनोः सम्बन्धदर्शनम् ಎಂದೂ ವ್ಯಾಖ್ಯಾನಿಸುತ್ತಾರೆ. ಈ ವ್ಯಾಖ್ಯೆಯು ವ್ಯಾಪ್ತಿಜ್ಞಾನದ ಅನ್ವಯವನ್ನೇ ಅನುಮಾನ ಎಂದು ಬೋಧಿಸುತ್ತದೆ. ಅನುಮಾನವು ಅನುಮಿತಿಗೆ ಕರಣವಾಗಿದ್ದು ಪರಾಮರ್ಶವು ಅವಾಂತರ ವ್ಯಾಪಾರವಾಗಿದೆ.

ಅನುಮಿತಿಯ ಲಕ್ಷಣವು ಸಂಶಯೋತ್ತರಪ್ರತ್ಯಕ್ಷದಲ್ಲಿ ಅತಿವ್ಯಾಪ್ತವಾಗಿದೆ. ಏಕೆಂದರೆ ಸಂಶಯೋತ್ತರಪ್ರತ್ಯಕ್ಷವೂ ಪರಾಮರ್ಶದಿಂದಲೇ ಜನಿಸುವ ಜ್ಞಾನವಾಗಿದೆ. 'ಕಂಬವೋ ಮನುಷ್ಯನೋ' ಎಂಬ ಸಂಶಯವಿರುವಾಗ ಸೂಕ್ಷ್ಮವಾಗಿ ಪರಿಶೀಲಿಸಿ ಕರಾದಿಮತ್ತ್ವವನ್ನು ಗ್ರಹಿಸುತ್ತೇವೆ. ಬಳಿಕ ಎಲ್ಲೆಲ್ಲಿ ಕರಾದಿಮತ್ತ್ವವಿದೆಯೋ ಅಲ್ಲೆಲ್ಲ ಮನುಷ್ಯತ್ವವಿದೆಯೆಂಬ ವ್ಯಾಪ್ತಿಗನುಗುಣವಾಗಿ मनुष्यत्वव्याप्यकरादिमान् ಎಂಬ ಪರಾಮರ್ಶವುಂಟಾಗುತ್ತದೆ. ಬಳಿಕ अयं मनुष्यः ಎಂಬ ಜ್ಞಾನವುಂಟಾಗುತ್ತದೆ. ಇದು ಪ್ರತ್ಯಕ್ಷಜ್ಞಾನವಾಗಿದೆ. ಈ ಜ್ಞಾನವೂ ಅನುಮಿತಿಯೇ ಆಗಿದ್ದರೆ ಅತಿವ್ಯಾಪ್ತಿಯುಂಟಾಗುತ್ತಿರಲಿಲ್ಲ. ಈ ಅತಿವ್ಯಾಪ್ತಿಯ ನಿವಾರಣೆಗಾಗಿ पक्षतासहकृतपरामर्शजन्यं ज्ञानम् ಎಂದು ಅನುಮಿತಿಯ ಲಕ್ಷಣವನ್ನು ಪರಿಷ್ಕರಿಸಬೇಕು. पक्षता ಎಂದರೆ सिषाधयिषा-विरहविशिष्टसिद्ध्यभावः। ಉದಾಹರಣೆಯೊಂದರಿಂದ ವಿವರಿಸುವುದಾದರೆ ಪರ್ವತದಲ್ಲಿ ಅಗ್ನಿಯ ಅನುಮಿತಿಯುಂಟಾಗಲಿ ಎಂಬ ಅಪೇಕ್ಷೆಯೇ ಸಿಷಾಧಯಿಷಾ. 'ಸಿದ್ಧಿ' ಎಂದರೆ ಪರ್ವತದಲ್ಲಿ

ಅಗ್ನಿಯಿದೆ ಎಂಬ ನಿಶ್ಚಿತವಾದ ಪ್ರತ್ಯಕ್ಷಜ್ಞಾನ. पर्वतो वह्निमान् इति प्रत्यक्षात्मक: साध्यनिश्चय: सिद्धि:। ಈ ಸಿದ್ಧಿಯು ಸಾಧ್ಯವನ್ನು ಸಾಧಿಸುವ ಅಪೇಕ್ಷೆಯಿಂದ ಹೊರತಾಗಿರಬೇಕು ಹಾಗೂ ಈ ತೆರನಾದ ಅಪೇಕ್ಷೆಯಿಂದ ರಹಿತವಾದ ಸಿದ್ಧಿಯು ಇಲ್ಲದಿರುವಿಕೆಯೇ ಪಕ್ಷತಾ. ಸಂಶಯೋತ್ತರಪ್ರತ್ಯಕ್ಷವು ಪರಾಮರ್ಶಜನ್ಯವಾದರೂ ಪಕ್ಷತಾಸಹಕೃತವಾದುದಲ್ಲ. ಹೀಗೆ ಈ ಪರಿಷ್ಕೃತಲಕ್ಷಣವು ಅತಿವ್ಯಾಪ್ತಿ ದೋಷದಿಂದ ಮುಕ್ತವಾಗುತ್ತದೆ.

ಅನುಮಾನದ ಅಂಗಗಳು ಎರಡು—ವ್ಯಾಪ್ತಿ ಮತ್ತು ಪಕ್ಷಧರ್ಮತೆ. ವ್ಯಾಪ್ತಿಯಿಂದ ಸಾಧ್ಯಸಾಮಾನ್ಯಸಿದ್ಧಿಯಾದರೆ ಹೇತುವಿನ ಪಕ್ಷಧರ್ಮತಾಜ್ಞಾನದಿಂದ ಸಾಧ್ಯವು ಪಕ್ಷದ ವಿಶೇಷವಾಗಿದೆ ಎಂದು ತಿಳಿಯುತ್ತದೆ.

ಒಬ್ಬ ವ್ಯಕ್ತಿಯು ಸ್ವತಃ ತನಗೆ ಅನುಮಿತಿಜ್ಞಾನವುಂಟಾಗಲು ಉಪಯೋಗಿಸುವ ಅನುಮಾನಕ್ಕೆ ಸ್ವಾರ್ಥಾನುಮಾನ ಎನ್ನುವರು. ಇಲ್ಲಿ ಈ ವ್ಯಕ್ತಿಯು ಕ್ರಮಿಸುವ ತರ್ಕಶುದ್ಧವಾದ ಊಹಾಸರಣಿ ಶಾಬ್ದಿಕರೂಪವನ್ನು ಹೊಂದಬೇಕಾದ ಅಗತ್ಯವಿಲ್ಲ. ಆದ್ದರಿಂದ ಸ್ವಾರ್ಥಾನುಮಾನವನ್ನು आर्थरूपत्वम्, न्यायाप्रयोज्यम्, ज्ञानात्मकम् ಎಂದೂ ವಿವರಿಸುತ್ತಾರೆ.

33. ಆದರೆ ತನಗೆ ಉಂಟಾದ ಅನುಮಿತಿಯನ್ನು ಅನ್ಯವ್ಯಕ್ತಿಗೆ ನಿವೇದಿಸಿ ಅವನಿಗೂ ಅನುಮಿತಿಜ್ಞಾನವುಂಟಾಗುವಂತೆ ಮಾಡಲು ಶಬ್ದಪ್ರಯೋಗದ ಅನಿವಾರ್ಯತೆ ಇದೆ. ಇಂತಹ ಪರಾರ್ಥಾನುಮಾನ ಕ್ರಮಬದ್ಧವಾದ ತರ್ಕಸರಣಿಯ ಐದು ವಾಕ್ಯಗಳನ್ನು ಹೊಂದಿರುತ್ತದೆ. ಈ ವಾಕ್ಯಗಳಿಗೆ 'ಅವಯವ'ಗಳೆಂದೂ ಇವುಗಳ ಸಮೂಹಕ್ಕೆ 'ನ್ಯಾಯ' ಎಂದೂ ಹೆಸರಿದೆ. ಪರಾರ್ಥಾನುಮಾನವನ್ನು पञ्चावयवेन वाक्येन स्वनिश्चितार्थप्रतिपादनम् ಎಂದು ವ್ಯಾಖ್ಯಾನಿಸಲಾಗಿದೆ. ಆದ್ದರಿಂದಲೇ ಇದನ್ನು शाब्दरूपत्वम्, न्यायप्रयोज्यम् ಎಂದೂ ಹೆಸರಿಸುತ್ತಾರೆ. ಇದು ಯಾವಾಗಲೂ ಸ್ವಾರ್ಥಾನುಮಾನವನ್ನು ಅವಲಂಬಿಸಿರುತ್ತದೆ.

ಪಂಚಾವಯವಗಳು

1) **ಪ್ರತಿಜ್ಞಾ** (Proposition): साध्यवत्त्वेन पक्षवचनं प्रतिज्ञा। ಯಾವುದನ್ನು ಸಾಧಿಸಬೇಕೋ ಅದನ್ನು ಪಕ್ಷವು ಒಳಗೊಂಡಿದೆ ಎಂಬ ವಾಕ್ಯವೇ ಪ್ರತಿಜ್ಞೆ.

2) **ಹೇತು** (Reason): लिङ्गस्य पक्षधर्मत्ववचनम्। ಲಿಂಗವು ಪಕ್ಷದ ಧರ್ಮವಾಗಿದೆ ಎಂದು ಹೇಳುವ ವಾಕ್ಯ. ಇಲ್ಲಿ ಲಿಂಗ ಮತ್ತು ಹೇತುಗಳಿಗಿರುವ ವ್ಯತ್ಯಾಸವೆಂದರೆ ಲಿಂಗವು ಧೂಮವಾದರೆ ಹೇತುವು ಈ ಧೂಮವು ಪಕ್ಷದಲ್ಲಿದೆ ಎಂದು ಹೇಳುವ ವಾಕ್ಯ.

3) ಉದಾಹರಣ (Example): सव्याप्तिकं दृष्टान्तवचनमुदाहरणम्। ಇದರಲ್ಲಿ ಎರಡು ಭಾಗಗಳಿವೆ. ಲಿಂಗ ಮತ್ತು ಸಾಧ್ಯದ ನಡುವೆ ನಿಯತಸಾಹಚರ್ಯ ಇದೆಯೆಂದು ಹೇಳುವುದೊಂದು, ಅದನ್ನು ಉದಾಹರಿಸುವುದು ಇನ್ನೊಂದು. ವ್ಯಾಪ್ತಿಪ್ರತಿಪಾದಕವಾದ ದೃಷ್ಟಾಂತವಚನಕ್ಕೆ ಉದಾಹರಣ ಎನ್ನುವರು.

4) ಉಪನಯ (Application): परामर्शत्ववचनमुपनय:। ವ್ಯಾಪ್ತಿಯಲ್ಲಿನ

ಸಾಮಾನ್ಯವಿಷಯವನ್ನು ವಿಶಿಷ್ಟಪಕ್ಷವೊಂದಕ್ಕೆ ಅನ್ವಯಿಸುವುದು ಉಪನಯ. ಇದು ಪರಾಮರ್ಶವೇ ಆಗಿದೆ.

5) ನಿಗಮನ (Conclusion): लिङ्गसम्बन्धप्रयुक्तनिश्चितसाध्यवत्त्ववचनम्। ಪ್ರತಿಜ್ಞೆಯನ್ನು ಹೇತುವಿನ ಮೂಲಕ ಸಾಧಿಸಿ ನಿಶ್ಚಿತತೆಯನ್ನು ತಿಳಿಸುವ ವಾಕ್ಯವೇ ನಿಗಮನ.

ಗೌತಮನ ನ್ಯಾಯಸೂತ್ರದ ಪ್ರಕಾರ ಅನುಮಾನದಲ್ಲಿ ಪೂರ್ವವತ್, ಶೇಷವತ್ ಮತ್ತು ಸಾಮಾನ್ಯತೋ ದೃಷ್ಟಮ್ ಎಂಬ ತ್ರಿವಿಧಗಳಿವೆ. ಕಾರಣದಿಂದ ಕಾರ್ಯವನ್ನು ಅನುಮಾನಿಸುವುದು ಮೊದಲ ವಿಧ. ಮೇಘಗಳನ್ನು ನೋಡಿ ಮಳೆಯಾಗುವುದೆಂದು ತಿಳಿಯುವುದು ಇದಕ್ಕೆ ಉದಾಹರಣೆ. ಎರಡನೆಯ ವಿಧದಲ್ಲಿ ಕಾರ್ಯದಿಂದ ಕಾರಣವನ್ನು ಅನುಮಾನ ಮಾಡಲಾಗುತ್ತದೆ. ಉದಾ: ಧೂಮದಿಂದ ಅಗ್ನಿಯನ್ನು ಅನುಮಾನಿಸುವುದು ಅಥವಾ ನದಿ ತುಂಬಿ ಹರಿಯುವುದನ್ನು ನೋಡಿ ಮೇಲಿನ ಪ್ರದೇಶದಲ್ಲಿ ಮಳೆಯಾಗಿರಬೇಕು ಎಂದು ಅನುಮಾನಿಸುವುದು. ಕಾರ್ಯ-ಕಾರಣಸಂಬಂಧ ವಿರಹಿತವಾದ ಅನುಮಾನಗಳೆಲ್ಲ ಸಾಮಾನ್ಯತೋದೃಷ್ಟವಾಗುತ್ತವೆ. ದ್ರವ್ಯಗಳ ಸ್ಥಾನಪಲ್ಲಟವು ಚಲನೆಯಿಂದ ಮಾತ್ರ ಸಾಧ್ಯ ಎಂಬುದು ಸಾಮಾನ್ಯವಾಗಿ ಗೃಹೀತವಾದುದು. ಮುಂಜಾನೆ ಪೂರ್ವದಲ್ಲಿ ಕಾಣುವ ಸೂರ್ಯ ಸಂಜೆ ಪಶ್ಚಿಮದಲ್ಲಿ ಕಾಣುವುದಕ್ಕೆ ಚಲನೆಯೇ ಕಾರಣ ಎಂದು ಊಹಿಸಬಹುದು. ಈ ಮೂರು ವಿಧಗಳನ್ನು ಇನ್ನೊಂದು ರೀತಿಯಲ್ಲಿಯೂ ವಿವರಿಸುತ್ತಾರೆ. ಅದರ ಪ್ರಕಾರ ಅನ್ವಯದ ದ್ವಾರಾ ಪ್ರವೃತ್ತವಾಗುವ ಅನುಮಾನ ಪೂರ್ವವತ್. ಈ ವಿವರಣೆಯಂತೆ ಧೂಮದಿಂದ ಅಗ್ನಿಯನ್ನು ಅನುಮಾನಿಸುವುದು ಪೂರ್ವವತ್. ವ್ಯತಿರೇಕದ್ವಾರಾ ಪ್ರವೃತ್ತವಾಗುವುದು ಶೇಷವತ್. ಲಿಂಗ ಮತ್ತು ಸಾಧ್ಯಗಳ ಸಂಬಂಧ ಪ್ರತ್ಯಕ್ಷವಾಗಿರದ ಸಂದರ್ಭದಲ್ಲಿ ಲಿಂಗದ ಇನ್ನೊಂದು ದೃಷ್ಟಸಂಬಂಧದ ಮೂಲಕ ಅದರ ಸಾಧ್ಯವನ್ನು ಅನುಮಾನ ಮಾಡುವುದು ಸಾಮಾನ್ಯತೋದೃಷ್ಟವಾಗುತ್ತದೆ.

34. ವ್ಯಾಪ್ತಿಯ ಆಧಾರದಿಂದ ಅಡಗಿರುವ ಸಾಧ್ಯವನ್ನು ಸೂಚಿಸುವುದೇ ಲಿಂಗ. व्याप्तिबलेन लीनमर्थं गमयतीति लिङ्गम्। ಪಕ್ಷದಲ್ಲಿರುವ ಅನುಮೇಯವಾದ ಸಾಧ್ಯದ ಜೊತೆ ನಿಯತ ಸಾಹಚರ್ಯಸಂಬಂಧವನ್ನು ಹೊಂದಿ ಸಾಧ್ಯವಿಲ್ಲದಿದ್ದಲ್ಲಿ ತಾನೂ ಇಲ್ಲದೇ ಅನುಮಿತಿಗೆ ಯಾವುದು ಸೂಚಕವಾಗುವುದೋ ಅದೇ ಲಿಂಗ.

अनुमेयेन सम्बद्धं प्रसिद्धं च तदन्विते।
तदभावे तु नास्त्येव तल्लिङ्गमनुमापकम्॥

ವ್ಯಾಪ್ತಿಯ ಸ್ವರೂಪದ ಆಧಾರದ ಮೇಲೆ ಲಿಂಗವು ತ್ರಿವಿಧವಾಗಿದೆ.

ಅನ್ವಯವ್ಯತಿರೇಕಿಲಿಂಗ: ಸಾಧ್ಯ ಮತ್ತು ಸಾಧನಗಳ ನಡುವೆ ನಿಯತಸಾಹಚರ್ಯಸಂಬಂಧ ಅಸ್ತಿತ್ವದಲ್ಲಿದ್ದಾಗ ವ್ಯಾಪ್ತಿ ಅನ್ವಯರೂಪಿಯಾಗಿರುತ್ತದೆ. ಅನ್ವಯವೆಂದರೆ ಇತ್ಯಾತ್ಮಕಸಂಬಂಧ (Positive relation) ಎಂದರ್ಥ. यत्र यत्र धूमः तत्र तत्र वह्निः, यथा महानसम् ಎಂಬಲ್ಲಿ ಇರುವ ಧೂಮ-ಅಗ್ನಿಗಳ ಸಂಬಂಧ ಇತ್ಯಾತ್ಮಕವಾದುದು. ಇಲ್ಲಿ ವ್ಯಾಪ್ತಿ ಅನ್ವಯರೂಪಿಯಾಗಿದೆ. ವ್ಯತಿರೇಕವೆಂದರೆ ಅಭಾವವೆಂದರ್ಥ. ಎಲ್ಲಿ ಸಾಧ್ಯದ ಅಭಾವವಿರುವುದೋ ಅಲ್ಲಿ ಸಾಧನದ

ಅಭಾವವೂ ಇರುತ್ತದೆ ಎಂಬಲ್ಲಿ ವ್ಯಾಪ್ತಿಯು ನೇತ್ಯಾತ್ಮಕವಾಗಿದೆ (Negative relation). ಉದಾಹರಣೆಗೆ, यत्र यत्र वह्न्यभावः तत्र तत्र धूमाभावः, यथा ह्रदः। ಇವೆರಡೂ ಪ್ರಕಾರದ ವ್ಯಾಪ್ತಿಯನ್ನು ಹೊಂದಿರುವ ಲಿಂಗವು ಅನ್ವಯವ್ಯತಿರೇಕಿಯಾಗುತ್ತದೆ.

ಈ ಎರಡು ವಿಧದ ವ್ಯಾಪ್ತಿಗಳೂ ಸಾಧ್ಯ-ಸಾಧನಗಳ ನಿಯತಸಾಹಚರ್ಯಸಂಬಂಧವನ್ನೇ ಪ್ರತಿಪಾದಿಸುತ್ತವೆ. ಧೂಮವು ಅಗ್ನಿಯೊಡನೆ ನಿಯತಸಾಹಚರ್ಯಸಂಬಂಧವನ್ನು ಹೊಂದಿದೆ ಎನ್ನುವುದೂ ಅಗ್ನಿಯ ಅಭಾವವಿದ್ದಲ್ಲಿ ಧೂಮಾಭಾವವೂ ಇರುತ್ತದೆ ಎನ್ನುವುದೂ ಒಂದೇ ವಿಷಯವನ್ನು ಪ್ರತಿಪಾದಿಸುತ್ತದೆ. ಅನ್ವಯವ್ಯಾಪ್ತಿಯಲ್ಲಿ ವ್ಯಾಪ್ಯವು ಸಾಧನವೂ (ಧೂಮ) ವ್ಯಾಪಕವು ಸಾಧ್ಯವೂ (ಅಗ್ನಿ) ಆಗಿದ್ದರೆ, ವ್ಯತಿರೇಕವ್ಯಾಪ್ತಿಯಲ್ಲಿ ಸಾಧನಾಭಾವವು (ಧೂಮಾಭಾವ) ವ್ಯಾಪಕವೂ ಸಾಧ್ಯಾಭಾವವು (ಅಗ್ನಿಯ ಅಭಾವ) ವ್ಯಾಪ್ಯವೂ ಆಗಿರುತ್ತದೆ.

अन्वये साधनं व्याप्यं साध्यं व्यापकमिष्यते।
साध्याभावोऽन्यथाव्याप्यो व्यापकः साधनात्मकः॥

ಎಲ್ಲ ಲಿಂಗಗಳಿಗೂ ಎರಡೂ ವಿಧದ ವ್ಯಾಪ್ತಿಗಳು ಇರುತ್ತವೆ ಎಂಬ ನಿಯಮವಿಲ್ಲ. ಕೇವಲಾನ್ವಯಿಲಿಂಗವು ಅನ್ವಯವ್ಯಾಪ್ತಿಯನ್ನು ಮಾತ್ರ ಹೊಂದಿದ್ದರೆ ಕೇವಲವ್ಯತಿರೇಕಿಲಿಂಗವು ವ್ಯತಿರೇಕವ್ಯಾಪ್ತಿಯನ್ನು ಮಾತ್ರ ಹೊಂದಿರುತ್ತದೆ.

ಕೇವಲವ್ಯತಿರೇಕಿಗೆ ಗ್ರಂಥದಲ್ಲಿ 'ಪೃಥಿವಿಯು ಇತರೆಲ್ಲವುಗಳಿಂದ ಭಿನ್ನ, ಗಂಧವಿರುವುದರಿಂದ' ಎಂಬ ಉದಾಹರಣೆಯನ್ನು ನೀಡಲಾಗಿದೆ. ಈ ಉದಾಹರಣೆಯಲ್ಲಿ 'ಇತರಭೇದ' ಎಂಬ ಸಾಧ್ಯವು ಪೂರ್ವಜ್ಞಾತವೋ ಅಲ್ಲವೋ? ಏಕೆಂದರೆ ಯಾವುದೇ ಸದನುಮಾನದಲ್ಲಿ ಸಾಧ್ಯವು ಸಪಕ್ಷದ ಮೂಲಕ ಪೂರ್ವಜ್ಞಾತವಾಗಿರುತ್ತದೆ. ಉದಾಹರಣೆಗೆ, 'ಪರ್ವತೋ ವಹ್ನಿಮಾನ್' ಎಂಬಲ್ಲಿ ವಹ್ನಿಮತ್ತ್ವ ಎಂಬ ಸಾಧ್ಯವು ಮಹಾನಸಾದಿಗಳಲ್ಲಿ ಕಂಡುಬರುವುದರಿಂದ ಪೂರ್ವಜ್ಞಾತವಾಗಿದೆ. ಹಾಗೆಯೇ ಕೇವಲವ್ಯತಿರೇಕಿಯ ಉದಾಹರಣೆಯಲ್ಲಿ 'ಇತರಭೇದ' ಎಂಬುದು ಪಕ್ಷವಾದ ಪೃಥಿವಿಯನ್ನು ಹೊರತುಪಡಿಸಿ ಬೇರೆಡೆ ಕಂಡು ಬರುವುದೋ ಇಲ್ಲವೋ ಎಂಬುದು ಇಲ್ಲಿಯ ಚರ್ಚೆ. ಒಂದು ವೇಳೆ ಇತರಭೇದವು ಅನ್ಯತ್ರ ಕಂಡುಬಂದಲ್ಲಿ ಆಗ ಹೇತುವೂ (ಗಂಧವತ್ತ್ವ) ಅದರ ಜೊತೆ (ಇತರಭೇದ ಎಂಬ ಸಾಧ್ಯದ ಜೊತೆ) ಇರುವುದೋ ಇಲ್ಲವೋ? ಇರುತ್ತದೆ ಎಂದಾದಲ್ಲಿ ಆಗ ಸಾಧ್ಯ-ಹೇತುಗಳು ಪೃಥಿವಿಯಿಂದ ಬೇರೆಡೆ ಕಂಡುಬರುವುದರಿಂದ ಅದು ಸ್ಪಷ್ಟವಾಗಿ ಸಪಕ್ಷವಾಗುತ್ತದೆ. ಆಗ ಅನ್ವಯವ್ಯಾಪ್ತಿಯುಂಟಾಗಿ ಕೇವಲವ್ಯತಿರೇಕಿ ಎಂಬುದೇ ಘಟಿಸುವುದಿಲ್ಲ. ಇನ್ನು ಹೇತುವು ಇತರೆಡೆ ಕಂಡುಬರದಿದ್ದಲ್ಲಿ ಅದು ಪಕ್ಷವಾದ ಪೃಥಿವಿಯ ಅಸಾಧಾರಣಧರ್ಮವಾಗಿ ವ್ಯಾಪ್ತಿಯೇ ಉಂಟಾಗದೇ ಅನುಮಿತಿಯೆಂಬುದೇ ಅಸಂಭವವಾಗುತ್ತದೆ. (ಅಸಾಧಾರಣಹೇತ್ವಾಭಾಸವಾಗುತ್ತದೆ.)

ಸಾಧ್ಯವು ಒಂದು ವೇಳೆ ಈ ಮೊದಲು ಜ್ಞಾತವಾಗಿಲ್ಲದಿದ್ದರೆ ಆಗಲೂ ಕೇವಲವ್ಯತಿರೇಕಿ ಘಟಿಸುವುದಿಲ್ಲ. ಏಕೆಂದರೆ ಇತರಭೇದ ಎಂಬುದು ಪೃಥಿವಿಯೆಂಬ ಪಕ್ಷದ ವಿಶೇಷಣವಾಗಿದೆ. ವಹ್ನಿ ಎಂದರೇನು ಎಂಬುದನ್ನು ಮೊದಲೇ ತಿಳಿದಿದ್ದರೆ ಮಾತ್ರ ವಹ್ನಿವಿಶಿಷ್ಟಪರ್ವತ ಎಂಬುದನ್ನು ಹೇಗೆ ತಿಳಿಯಲು ಸಾಧ್ಯವೋ ಹಾಗೆಯೇ ಇತರಭೇದ ಎಂಬುದನ್ನು ಮೊದಲೇ ತಿಳಿದಿದ್ದರೆ ಮಾತ್ರ ಪೃಥಿವಿ

ಇತರಭಿನ್ನ ಎಂಬುದನ್ನು ತಿಳಿಯಲು ಸಾಧ್ಯ. ಆದರೆ ಇತರಭೇದ ಎಂಬುದು ಪೃಥಿವಿಯನ್ನು ಬಿಟ್ಟು ಇತರೆಡೆ ಇಲ್ಲದಿರುವುದರಿಂದ ಅದು ನಮಗೆ ಪೂರ್ವಜ್ಞಾತವಲ್ಲ. ವಿಶೇಷಣವು ಪೂರ್ವಜ್ಞಾತವಾಗದೆ ವಿಶೇಷ್ಯವನ್ನು ಅರಿಯುವುದು ಅಸಾಧ್ಯ. ಆದ್ದರಿಂದ ಇತರಭೇದವಿಶಿಷ್ಟಾ ಪೃಥಿವೀ ಎಂಬ ಅನುಮಿತಿ ಇಲ್ಲಿ ಉಂಟಾಗುವುದಿಲ್ಲ.

ಕೇವಲವ್ಯತಿರೇಕಿಯನ್ನು ಆಕ್ಷೇಪಿಸುವ ಮೂರನೆಯ ಕಾರಣವೆಂದರೆ ಇತರಭೇದ ಎಂಬ ಪ್ರತಿಯೋಗಿಯ ಜ್ಞಾನವಿದ್ದರೆ ಮಾತ್ರ ಇತರಭೇದಾಭಾವ ಎಂಬುದನ್ನು ಅರಿಯಲು ಸಾಧ್ಯ, ಎಂದರೆ ಕೇವಲವ್ಯತಿರೇಕಿಯ ಉದಾಹರಣೆಯಲ್ಲಿ यत्र गन्धवत्त्वम् तत्र इतरभिन्नत्वम् ಎಂಬುದು ಅನ್ವಯವ್ಯಾಪ್ತಿ. ಹಾಗೆಯೇ यत्र इतरभेदाभाव: तत्र गन्धवत्त्वाभाव: ಎಂಬುದು ವ್ಯತಿರೇಕವ್ಯಾಪ್ತಿ. ಇಲ್ಲಿ ಇತರಭೇದಾಭಾವ ಎಂಬುದನ್ನು ಅರಿಯಲು ಇತರಭೇದ ಎಂಬ ಪ್ರತಿಯೋಗಿಯ ಜ್ಞಾನ ಅಗತ್ಯ. ಆದರೆ ಪ್ರತಿಯೋಗಿಯ ಜ್ಞಾನವೇ ಉಂಟಾಗದಿರುವುದರಿಂದ ಅದರ ಅಭಾವಜ್ಞಾನವೂ ಉಂಟಾಗುವುದಿಲ್ಲ. ಆದ್ದರಿಂದ ವ್ಯತಿರೇಕವ್ಯಾಪ್ತಿ ಸಿದ್ಧಿಸುವುದಿಲ್ಲ. ಆದ್ದರಿಂದಲೇ ಕೇವಲವ್ಯತಿರೇಕಿ ಎಂಬುದೂ ಸಿದ್ಧಿಸುವುದಿಲ್ಲ.

ಈ ಆಕ್ಷೇಪಗಳಿಗೆ ದೀಪಿಕೆಯ ಪರಿಹಾರವನ್ನು ಹೀಗೆ ಸಂಗ್ರಹಿಸಬಹುದು—ಇಲ್ಲಿಯ ಅನುಮಾನದ ಸಾಧ್ಯವಾದ 'ಇತರಭೇದ' ಎಂಬುದರ ಅರ್ಥ ಹದಿನಾಲ್ಕು ಪದಾರ್ಥಗಳ ಸಮುದಾಯಭೇದ ಎಂದಲ್ಲ. ಬದಲಾಗಿ ಪೃಥಿವಿಯ ಜೊತೆ ಆ ಹದಿನಾಲ್ಕು ಪದಾರ್ಥಗಳ (ಆರು ಪದಾರ್ಥಗಳು ಎಂಟು ದ್ರವ್ಯಗಳು) ಅನ್ಯೋನ್ಯಾಭಾವದ ಏಕಕಾಲದ ಅಸ್ತಿತ್ವ ಎಂಬುದು ಇಲ್ಲಿಯ ಸಾಧ್ಯ. ಈ ಅನ್ಯೋನ್ಯಾಭಾವವು ಹದಿನಾಲ್ಕು ಪದಾರ್ಥಗಳ ಹದಿಮೂರು ದ್ವಂದ್ವಗಳಲ್ಲಿ ಉಂಟಾಗುತ್ತದೆ. ಹೀಗೆ ಜಲಭೇದವು ತೇಜಸ್ ಮುಂತಾದ ಹದಿಮೂರರಲ್ಲಿರುತ್ತದೆ. ಈ ಹದಿಮೂರು ಅನ್ಯೋನ್ಯಾಭಾವಗಳ ಅಸ್ತಿತ್ವವು ಪೃಥಿವಿಯಲ್ಲಿ ಏಕಕಾಲದಲ್ಲಿರುತ್ತದೆ. त्रयोदशत्वावच्छिन्नभेदस्य एकाधिकरणवृत्तित्वम्। ಈ ಸಾಧ್ಯವು ಸಪಕ್ಷದಲ್ಲಿ ಪೂರ್ವಜ್ಞಾತವಾಗಿರುವ ಸಾಧ್ಯತೆ ಇಲ್ಲವಾದ್ದರಿಂದ ಅಲ್ಲಿ ಹೇತುವಿನ ಅಸ್ತಿತ್ವವನ್ನೂ ನಿರ್ಧರಿಸಲಾಗದು. ಆದ್ದರಿಂದ ಹೇತುವನ್ನು ಅನ್ವಯಿ ಎಂದಾಗಲಿ ಅಸಾಧಾರಣ ಎಂದಾಗಲಿ ಹೇಳಲಾಗದು. ಆದ್ದರಿಂದಲೇ ಇದು ಕೇವಲವ್ಯತಿರೇಕಿ. ಹೀಗೆ ಮೊದಲ ಆಕ್ಷೇಪವು ಪರಿಹೃತವಾಗುತ್ತದೆ.

ಇನ್ನು ಸಾಧ್ಯವು ಪೂರ್ವಜ್ಞಾತವಾಗದಿದ್ದಲ್ಲಿ ಅನುಮಿತಿಯು ಅಸಂಭವ ಎಂಬ ಆಕ್ಷೇಪವೂ ನಿಲ್ಲುವುದಿಲ್ಲ. ಏಕೆಂದರೆ ಜಲಾದಿಭೇದಕೂಟ ಎಂಬ ಸಾಧ್ಯವು ಪೃಥಿವೀಭಿನ್ನವಾದ ಇತರ ಪದಾರ್ಥಗಳ ಅನ್ಯೋನ್ಯಾಭಾವದ ಮೂಲಕ ಪ್ರತ್ಯೇಕವಾಗಿ ಜ್ಞಾತವಾಗಿದೆ. ಇಲ್ಲಿ ಪೂರ್ವಪಕ್ಷಿಯು ಜಲಾದಿಭೇದಕೂಟದ ಪ್ರತ್ಯೇಕಜ್ಞಾನವಿದ್ದರೂ ಏಕಕಾಲದಲ್ಲಿ ಏಕತ್ರಜ್ಞಾನ ಇಲ್ಲದಿರುವುದರಿಂದ ಸಾಧ್ಯವು ಪೂರ್ವಜ್ಞಾತವಾಗಿಲ್ಲವೆಂದು ಆಕ್ಷೇಪಿಸಬಹುದು. ಇದಕ್ಕೆ ನೈಯಾಯಿಕರ ಸಮಾಧಾನವೆಂದರೆ ಸಮುದಾಯವು ವ್ಯಕ್ತಿಗಿಂತ ಭಿನ್ನವಾಗಿಲ್ಲ ಮತ್ತು ಇಲ್ಲಿಯ ಸಾಧ್ಯ ಕಾಲ್ಪನಿಕಸಮುದಾಯವಲ್ಲ. ಬದಲಾಗಿ ಪ್ರತ್ಯೇಕಾಧಿಕರಣದಲ್ಲಿ ಆಗಲೇ ಪ್ರಸಿದ್ಧವಾದುದು ಮತ್ತು ಅದನ್ನು ಸಾಮೂಹಿಕವಾಗಿ ಪೃಥಿವಿಯಲ್ಲಿ ಸಾಧಿಸಬಹುದು. ಹೀಗೆ ಸಾಧ್ಯವಿಶಿಷ್ಟ ಅನುಮಿತಿಯನ್ನೂ ಕೇವಲವ್ಯತಿರೇಕಿಯನ್ನೂ ಸಾಧಿಸಬಹುದು.

35. ಈ ಪರಿಚ್ಛೇದದಲ್ಲಿ ಗ್ರಂಥಕಾರನು ಪಕ್ಷ, ಸಪಕ್ಷ ಮತ್ತು ವಿಪಕ್ಷಗಳನ್ನು ಲಕ್ಷಿಸಿದ್ದು ಅವುಗಳ ವಿವರಣೆಯನ್ನು ಪರಿಚ್ಛೇದ 32ರಲ್ಲಿ ನೀಡಲಾಗಿದೆ.

36. ಹೇತ್ವಾಭಾಸ: ಅನುಮಾನನಿರ್ಣಾಯಕವಾದ ಹೇತುವನ್ನು 'ಸದ್‌ಹೇತು' ಮತ್ತು 'ಅಸದ್‌ಹೇತು' ಎಂದು ವಿಭಜಿಸುತ್ತಾರೆ. ಯಾವುದೊಂದು ಹೇತು ಸದ್ ಹೇತುವಾಗಬೇಕಾದರೆ ಅದರಲ್ಲಿ ಐದು ವೈಶಿಷ್ಟ್ಯಗಳು (ಅಂಗಗಳು) ಇರಬೇಕು.

1) पक्षधर्मत्वम्—ಹೇತುವು ಪಕ್ಷದ ಧರ್ಮವಾಗಿರುವಿಕೆ; ಧೂಮವು ಪರ್ವತದ ಧರ್ಮವಾಗಿರುವಂತೆ.
2) सपक्षे सत्त्वम्—ಹೇತುವು ತನ್ನ ಸಪಕ್ಷದಲ್ಲಿ ಇರುವಿಕೆ; ಮಹಾನಸದಲ್ಲಿ ಧೂಮವಿರುವಂತೆ.
3) विपक्षात् व्यावृत्तिः—ಹೇತುವು ತನ್ನ ವಿಪಕ್ಷದಲ್ಲಿ ಇಲ್ಲದಿರುವಿಕೆ; ಧೂಮವು ಹ್ರದದಲ್ಲಿ ಇಲ್ಲದಿರುವಂತೆ.
4) अबाधितविषयत्वम्—ಹೇತುವು ಸಾಧಿಸಬೇಕಾದ ಸಾಧ್ಯದ ಅಭಾವವನ್ನು ಸಾಧಿಸುವ ಇನ್ನೊಂದು ಬಲವತ್ತರವಾದ ಪ್ರಮಾಣ ಇಲ್ಲದಿರುವಿಕೆ. अग्निरनुष्णः, द्रव्यत्वात्, जलवत्। ಎಂಬಲ್ಲಿ ದ್ರವ್ಯತ್ವವೆಂಬ ಹೇತುವು ಅಗ್ನಿಯಲ್ಲಿ ಅನುಷ್ಣತ್ವವನ್ನು ಸಾಧಿಸಲು ಪ್ರಯತ್ನಿಸುತ್ತಿದೆ. ಆದರೆ ಅಗ್ನಿಯಲ್ಲಿ ಅನುಷ್ಣತ್ವದ ಅಭಾವವಾದ ಉಷ್ಣತ್ವವಿದೆ ಎನ್ನುವುದು ಅನುಮಾನಕ್ಕಿಂತ ಬಲವತ್ತರವಾದ ಪ್ರತ್ಯಕ್ಷಪ್ರಮಾಣದಿಂದ ಸಾಧಿತವಾಗಿದೆ.
5) असत्प्रतिपक्षत्वम्। ಸಾಧ್ಯದ ಅಭಾವವನ್ನು ಸಾಧಿಸುವ ಪ್ರತಿಪಕ್ಷ ಇಲ್ಲದಿರುವಿಕೆ. शब्दः नित्यः, श्रावणत्वात् शब्दत्ववत्। ಇಲ್ಲಿ ಶ್ರಾವಣತ್ವವೆಂಬ ಹೇತುವು ಶಬ್ದದಲ್ಲಿ ನಿತ್ಯತೆಯನ್ನು ಪ್ರತಿಪಾದಿಸಹೊರಟಾಗ शब्दः अनित्यः, कार्यत्वात्, घटवत्। ಎಂಬ ಕಾರ್ಯತ್ವರೂಪಿ ಹೇತು ಪ್ರತಿಪಕ್ಷವಾಗಿ ಬಂದು ಶಬ್ದದ ಅನಿತ್ಯತೆಯನ್ನು ಸಾಧಿಸುತ್ತದೆ. ಆದ್ದರಿಂದ ಮೊದಲಿನ ಅನುಮಾನದಲ್ಲಿಯ ಶ್ರಾವಣತ್ವವೆಂಬ ಹೇತು ಸತ್ಪ್ರತಿಪಕ್ಷವಾಗಿದೆ.

ಈ ಐದು ಗುಣವಿಶೇಷಗಳು ಅನ್ವಯವ್ಯತಿರೇಕಿಲಿಂಗದಲ್ಲಿ ಮಾತ್ರ ಇರುತ್ತವೆ. ಕೇವಲಾನ್ವಯಿ ಮತ್ತು ಕೇವಲವ್ಯತಿರೇಕಿಗಳು ನಾಲ್ಕು ಗುಣವಿಶೇಷಗಳನ್ನು ಮಾತ್ರ ಹೊಂದಿದ್ದು ಸದ್‌ಹೇತುಗಳೇ ಆಗಿವೆ. ಕೇವಲಾನ್ವಯಿಯಲ್ಲಿ ವಿಪಕ್ಷವ್ಯಾವೃತ್ತಿ ಇಲ್ಲವಾದರೆ ಕೇವಲವ್ಯತಿರೇಕಿಯಲ್ಲಿ ಸಪಕ್ಷಸತ್ತ್ವವಿಲ್ಲ.

ಈ ಐದು ಗುಣವಿಶೇಷಗಳಲ್ಲಿ ಎಲ್ಲವನ್ನು ಅಥವಾ ಕೆಲವನ್ನು ಹೊಂದದೇ ಇರುವ ಹೇತುಗಳೇ ಅಸದ್‌ಹೇತುಗಳು. ಅಸದ್‌ಹೇತುವೇ ಹೇತ್ವಾಭಾಸ. ಆದ್ದರಿಂದಲೇ ಹೇತ್ವಾಭಾಸವನ್ನು अङ्गविकलो हेतुः। ಎಂದೂ ವ್ಯಾಖ್ಯಾನಿಸಲಾಗುತ್ತದೆ. हेतुवत् आभासन्ते इति हेत्वाभासाः, दुष्टहेतव इत्यर्थः। ಎಂದು ಹೇತ್ವಾಭಾಸವನ್ನು ನಿರ್ವಚಿಸುತ್ತಾರೆ, ಎಂದರೆ ದೋಷಸಹಿತವಾಗಿದ್ದು ಹೇತುವಿನಂತೆ ತೋರುವ (ಆಭಾಸ) ಹೇತುವೇ ಹೇತ್ವಾಭಾಸ.

ದೀಪಿಕೆಯಲ್ಲಿ ಹೇತ್ವಾಭಾಸದ ಲಕ್ಷಣ ಹೀಗಿದೆ: अनुमितिप्रतिबन्धकयथार्थज्ञानविषयत्वं हेत्वाभासत्वम्। ಅನುಮಿತಿಗೆ ಅಡ್ಡಿಯನ್ನುಂಟುಮಾಡುವ ಯಥಾರ್ಥಜ್ಞಾನಕ್ಕೆ ಯಾವುದು

ವಿಷಯವಾಗಿರುವುದೋ ಅದು ಹೇತ್ವಾಭಾಸ. ह्रदो वह्निमान्, धूमात्। ಎಂಬ ಅನುಮಾನದಿಂದ ಕೊಳವು ಅಗ್ನಿಯನ್ನು ಹೊಂದಿದೆ ಎಂಬ ಅನುಮಿತಿ ಉಂಟಾಗಬೇಕಿತ್ತು. ಆದರೆ ಕೊಳವು ಅಗ್ನಿಯ ಅಭಾವವನ್ನು ಹೊಂದಿದೆ ಎಂಬ ಯಥಾರ್ಥಜ್ಞಾನವು ಮೇಲಿನ ಅನುಮಿತಿ ಉಂಟಾಗದಂತೆ ಅಡ್ಡಿಪಡಿಸುತ್ತದೆ. ಅನುಮಿತಿಪ್ರತಿಬಂಧಕವಾದ ಈ ಯಥಾರ್ಥಜ್ಞಾನಕ್ಕೆ ವಿಷಯವಾದುದು ಧೂಮ. ಅದು ಕೊಳದಲ್ಲಿ ಅಗ್ನಿಯನ್ನು ಸಾಧಿಸಲು ಸಮರ್ಥವಾಗದೇ ಹೇತ್ವಾಭಾಸವಾಗುತ್ತದೆ.

ವ್ಯಭಿಚಾರ, ವಿರೋಧ, ಪ್ರತಿಪಕ್ಷ, ಅಸಿದ್ಧ ಮತ್ತು ಬಾಧಗಳೆಂಬ ಪಂಚ ದೋಷಗಳಿಂದ सव्यभिचार, विरुद्ध, सत्प्रतिपक्ष, असिद्ध, बाधित ಎಂಬ ಪಂಚ ಹೇತ್ವಾಭಾಸಗಳು ಉಂಟಾಗುತ್ತವೆ.

37. ವ್ಯಭಿಚಾರ ಎಂದರೆ ವಿಹಿತವಾದ ಪರಿಧಿಯನ್ನು ಅತಿಕ್ರಮಿಸುವುದು ಎಂದರ್ಥ. ಸಾಧ್ಯ-ಸಾಧನಗಳ ನಡುವಿನ ನಿಯತಸಾಹಚರ್ಯಸಂಬಂಧವು ಎಲ್ಲಿ ಉಲ್ಲಂಘಿಸಲ್ಪಡುತ್ತದೆಯೋ ಅದು ವ್ಯಭಿಚರಿತವಾಗುತ್ತದೆ. ಇಂತಹ ವ್ಯಭಿಚಾರದಿಂದ ಕೂಡಿದ ಹೇತುವು ಒಂದೇ ಪರಿಣಾಮವನ್ನು ಉಂಟುಮಾಡದೇ ಅಂದರೆ ಏಕಾಂತವಲ್ಲದೇ ಅನೇಕ ಪರಿಣಾಮಗಳನ್ನು ಉಂಟುಮಾಡುವುದರಿಂದ ಸವ್ಯಭಿಚಾರವನ್ನು ಅನೈಕಾಂತಿಕ ಎಂದು ಕರೆಯುತ್ತಾರೆ.

ಇದರಲ್ಲಿ ಮೂರು ಉಪಭೇದಗಳಿವೆ. ಸಾಧಾರಣಸವ್ಯಭಿಚಾರದಲ್ಲಿ ವಿಪಕ್ಷವ್ಯಾವೃತ್ತಿ ಇಲ್ಲ. ಅನ್ಯ ಉದಾಹರಣೆ— आङ्ग्लः पूज्यः, श्वेतत्वात्।

ಸಾಧಾರಣಸವ್ಯಭಿಚಾರ ಮತ್ತು ಕೇವಲಾನ್ವಯಿಲಿಂಗಗಳ ನಡುವೆ ಸಾಮ್ಯ-ವೈಷಮ್ಯ

ಸಾಮ್ಯ: ಎರಡರಲ್ಲಿಯೂ ವಿಪಕ್ಷವ್ಯಾವೃತ್ತಿ ಇಲ್ಲ.

ವೈಷಮ್ಯ:

1) ಕೇವಲಾನ್ವಯಿಯಲ್ಲಿ ವಿಪಕ್ಷವೇ ಇಲ್ಲವಾದರೆ ಸಾಧಾರಣದಲ್ಲಿ ವಿಪಕ್ಷವಿದ್ದು ಹೇತುವು ತನ್ನಲ್ಲಿಯ ದೋಷದಿಂದ ವಿಪಕ್ಷವ್ಯಾವೃತ್ತವಾಗಿಲ್ಲ.
2) ಕೇವಲಾನ್ವಯಿಯಲ್ಲಿ ಅನ್ವಯವ್ಯಾಪ್ತಿ ಸಿದ್ಧಿಸುವುದಾದರೆ ಸಾಧಾರಣದಲ್ಲಿ ಅದು ವ್ಯಭಿಚರಿತವಾಗುತ್ತದೆ.
3) ಕೇವಲಾನ್ವಯಿಯ ವೈಶಿಷ್ಟ್ಯವೆಂದರೆ ಸಾಧ್ಯ ಮತ್ತು ಸಾಧನಗಳು ಅಸ್ತಿತ್ವದಲ್ಲಿರುವ ಎಲ್ಲವಕ್ಕೂ ಅನ್ವಯಿಸುತ್ತವೆ. ಆದರೆ ಸಾಧಾರಣದಲ್ಲಿ ಸಾಧ್ಯವು ಅಲ್ಪದೇಶವೃತ್ತಿಯಾಗಿದ್ದು ಸಾಧನವು ಅಧಿಕದೇಶವೃತ್ತಿಯಾಗಿರುತ್ತದೆ.

ಅಸಾಧಾರಣಹೇತ್ವಾಭಾಸದಲ್ಲಿ ಸಪಕ್ಷಸತ್ತ್ವ ಇಲ್ಲ. ಇದನ್ನು 'ಅನಧ್ಯವಸಿತ' ಎಂದೂ ಕರೆಯುತ್ತಾರೆ. ಅನ್ಯ ಉದಾಹರಣೆ— भूः नित्या, गन्धवत्त्वात्।

ಅಸಾಧಾರಣಸವ್ಯಭಿಚಾರ ಮತ್ತು ಕೇವಲವ್ಯತಿರೇಕಿಲಿಂಗಗಳ ನಡುವೆ ಸಾಮ್ಯ–ವೈಷಮ್ಯ

ಸಾಮ್ಯ: ಎರಡರಲ್ಲಿಯೂ ಸಪಕ್ಷಸತ್ತ್ವ ಇಲ್ಲ.

ವೈಷಮ್ಯ:

1) ಕೇವಲವ್ಯತಿರೇಕಿಯಲ್ಲಿ ಸಪಕ್ಷವೇ ಇಲ್ಲವಾದರೆ ಅಸಾಧಾರಣದಲ್ಲಿ ಸಪಕ್ಷವಿದ್ದು ಹೇತುವು ಅವುಗಳಲ್ಲಿ ತನ್ನ ದೋಷದಿಂದ ಕಂಡುಬರುವುದಿಲ್ಲ.

2) ಕೇವಲವ್ಯತಿರೇಕಿಯಲ್ಲಿ ಸಾಧ್ಯ ಮತ್ತು ಸಾಧನಗಳು ಸಮವ್ಯಾಪಕವಾದರೆ ಅಸಾಧಾರಣದಲ್ಲಿ ಹಾಗಿಲ್ಲ.
3) ಕೇವಲವ್ಯತಿರೇಕಿಯಲ್ಲಿ ವ್ಯಾಪ್ತಿಯು ಸಮರ್ಥವಾಗಿದ್ದರೆ ಅಸಾಧಾರಣದಲ್ಲಿ ವ್ಯಭಿಚರಿತವಾಗಿದೆ.

ಅನುಪಸಂಹಾರಿಯಲ್ಲಿ ಅಸ್ತಿತ್ವದಲ್ಲಿರುವ ಎಲ್ಲವೂ ಪಕ್ಷವಾಗಿ ಹೇತುವು ಅನ್ವಯ ಮತ್ತು ದೃಷ್ಟಾಂತರಹಿತವಾಗಿರುತ್ತದೆ. ಆದ್ದರಿಂದ ಈ ಹೇತುವಿಗೆ ಸಪಕ್ಷಸತ್ತ್ವ ಮತ್ತು ವಿಪಕ್ಷವ್ಯಾವೃತ್ತಿ ಎಂಬ ಸದ್‌ಹೇತುಲಕ್ಷಣಗಳಿಲ್ಲ. ಅನ್ನ ಉದಾಹರಣೆ— सर्वं दु:खात्मकम्, अनित्यत्वात्।

38. ವಿರುದ್ಧ ಹೇತ್ವಾಭಾಸವು ಸಾಧಾರಣಸವ್ಯಭಿಚಾರದಂತೆ ಸಾಧ್ಯಾಭಾವವನ್ನು ಸಾಧಿಸುತ್ತದೆ. ಆದರೆ ಸಾಧಾರಣವು ಸಾಧ್ಯಾಭಾವದ ಜೊತೆ ಸಾಧ್ಯವನ್ನು ಸಾಧಿಸುತ್ತದೆ. ಸಾಧಾರಣವು ಸಪಕ್ಷ ಮತ್ತು ವಿಪಕ್ಷಗಳಲ್ಲಿದ್ದರೆ ವಿರುದ್ಧವು ವಿಪಕ್ಷದಲ್ಲಿ ಮಾತ್ರ ಇರುತ್ತದೆ. ಇನ್ನು ವಿರುದ್ಧವು ಸಾಧ್ಯಾಭಾವ ಸಾಧಕವಾದುದರಿಂದ ಸಪಕ್ಷದಲ್ಲಿ ಇರುವುದಿಲ್ಲ. ಆದರೆ ಅಸಾಧಾರಣವು ಪಕ್ಷಮಾತ್ರವೃತ್ತಿಯಾಗಿ ಸಪಕ್ಷದಲ್ಲಿರುವುದಿಲ್ಲ. ವಿರುದ್ಧವು ಸಾಧ್ಯದ ಅಭಾವವನ್ನು ಮಾತ್ರ ಸಾಧಿಸಿದರೆ ಅಸಾಧಾರಣವು ಸಾಧ್ಯವನ್ನಾಗಲಿ ಸಾಧ್ಯದ ಅಭಾವವನ್ನಾಗಲಿ ಯಾವುದನ್ನೂ ಸಾಧಿಸುವುದಿಲ್ಲ.

ಹಾಗೆಯೇ ವಿರುದ್ಧ ಮತ್ತು ಅನುಪಸಂಹಾರಿಗಳು ಸಪಕ್ಷಸತ್ತ್ವ ಮತ್ತು ವಿಪಕ್ಷವ್ಯಾವೃತ್ತಿಯೆಂಬ ಸದ್‌ಹೇತುಲಕ್ಷಣಗಳಿಂದ ವಿರಹಿತವಾಗಿ ಸಮಾನವಾಗಿವೆ. ಆದರೆ ಅನುಪಸಂಹಾರಿಯಲ್ಲಿ ವ್ಯಾಪ್ತಿಯ ಅಪೂರ್ಣತೆಯಿಂದ ಯಾವ ನಿಶ್ಚಯವೂ ಆಗದಿದ್ದರೆ ವಿರುದ್ಧದಲ್ಲಿ ಸಾಧ್ಯದ ಅಭಾವವು ನಿಶ್ಚಯಿಸಲ್ಪಡುತ್ತದೆ.

ಅನ್ನ ಉದಾಹರಣೆ— देवदत्त: अमर्त्य:, मनुष्यत्वात्।

39. 'ಪ್ರತಿಪಕ್ಷ' ಎಂದರೆ ವಿರೋಧಿ ಎಂದರ್ಥ. 'ಸತ್' ಎಂದರೆ ವಿದ್ಯಮಾನವಾಗಿರುವುದು. ಯಾವ ಹೇತುವಿಗೆ ತನ್ನ ಸಾಧನಕ್ಕೆ ವಿರುದ್ಧವಾದುದನ್ನು ಸಾಧಿಸುವ ಶತ್ರುಹೇತು ಇರುವುದೋ ಅದೇ ಸತ್ಪ್ರತಿಪಕ್ಷ. ಇದನ್ನು 'ಪ್ರಕರಣಸಮ' ಎಂದೂ ಕರೆಯುತ್ತಾರೆ.

ಅನ್ನ ಉದಾಹರಣೆ:

आकाश: अप्रत्यक्ष:, अतीन्द्रियत्वात्।

आकाश: प्रत्यक्ष:, शब्दगुणत्वात्।

ಸತ್ಪ್ರತಿಪಕ್ಷ ಮತ್ತು ವಿರುದ್ಧ ಇವೆರಡೂ ಸಾಧ್ಯಾಭಾವವನ್ನು ಸಾಧಿಸುತ್ತವೆ. ವಿರುದ್ಧದಲ್ಲಿ ಸ್ವಯಂ ಹೇತುವೇ ಸಾಧ್ಯಾಭಾವಸಾಧಕವಾದರೆ ಸತ್ಪ್ರತಿಪಕ್ಷದಲ್ಲಿ ಹೇತ್ವಂತರವು ಸಾಧ್ಯಾಭಾವಸಾಧಕವಾಗಿದೆ. ವಿರುದ್ಧದಲ್ಲಿ ಸಾಧ್ಯಾಭಾವವು ಮಾತ್ರ ಸಾಧಿಸಲ್ಪಟ್ಟರೆ ಸತ್ಪ್ರತಿಪಕ್ಷದಲ್ಲಿ ಒಂದು ಹೇತುವಿನಿಂದ ಸಾಧ್ಯವೂ ಇನ್ನೊಂದು ಹೇತುವಿನಿಂದ ಸಾಧ್ಯಾಭಾವವೂ ಸಾಧಿಸಲ್ಪಡುತ್ತದೆ.

40. व्याप्यस्य पक्षधर्मतया प्रमिति: सिद्धि:, तदभाव: असिद्ध:। ಸಿದ್ಧಿಯು ಪರಾಮರ್ಶದಂತೆ

ಪಕ್ಷಧರ್ಮತಾ ಮತ್ತು ವ್ಯಾಪ್ತಿ ಎಂಬ ಎರಡು ವಿಷಯಗಳನ್ನು ಹೊಂದಿರುತ್ತದೆ. ಇವೆರಡರಲ್ಲಿ ಯಾವುದಾದರೊಂದರಿಂದ ನ್ಯೂನವಾಗಿರುವ ಹೇತು ಅಸಿದ್ಧವಾಗುತ್ತದೆ. ಹೇತುವು ಪಕ್ಷಧರ್ಮತೆ-ಯನ್ನು ದ್ವಿವಿಧವಾಗಿ ಕಳೆದುಕೊಂಡಿರಬಹುದು—ಪಕ್ಷಕ್ಕೆ ವಾಸ್ತವಿಕ ಅಸ್ತಿತ್ವವೇ ಇಲ್ಲದಿರುವುದೊಂದು ಮತ್ತು ಹೇತುವು ಪಕ್ಷದಲ್ಲಿ ಇಲ್ಲದಿರುವುದು ಇನ್ನೊಂದು. ಮೊದಲನೆಯದರಲ್ಲಿ ಹೇತುವಿಗೆ ಆಶ್ರಯವೇ ಇಲ್ಲದಿರುವುದರಿಂದ ಅದು ಆಶ್ರಯಾಸಿದ್ಧವಾಗುತ್ತದೆ. ಎರಡನೆಯದರಲ್ಲಿ ಹೇತುವು ಸ್ವರೂಪದಿಂದ ಪಕ್ಷದಲ್ಲಿ ಅಸಿದ್ಧವಾಗಿ ಸ್ವರೂಪಾಸಿದ್ಧವಾಗುತ್ತದೆ.

ಇನ್ನು ಹೇತುವಿಗೆ ಸಾಧ್ಯದೊಂದಿಗಿನ ವ್ಯಾಪ್ತಿಯು ಸಿದ್ಧಿಸದಿರುವಾಗ ಅದು ವ್ಯಾಪ್ಯತ್ವಾಸಿದ್ಧ-ವಾಗುತ್ತದೆ. ಅಸಿದ್ಧವನ್ನು 'ಸಾಧ್ಯಸಮ' ಎಂಬ ನಾಮಾಂತರದಿಂದಲೂ ವ್ಯವಹರಿಸುತ್ತಾರೆ. ಆಶ್ರಯಾಸಿದ್ಧದ ಅನ್ಯ ಉದಾಹರಣೆ—वन्ध्यापुत्रः शूरः, पुत्रत्वात्। ಸಿದ್ಧಸಾಧನವನ್ನೂ ಆಶ್ರಯಾಸಿದ್ಧದಲ್ಲಿಯೇ ಅಂತರ್ಗತಗೊಳಿಸುತ್ತಾರೆ. चन्द्रबिम्बं वर्तुलम्, वर्तुलत्वात्। ಎಂಬಲ್ಲಿ ಚಂದ್ರಬಿಂಬವು ವರ್ತುಲ ಎಂಬುದು ಈಗಾಗಲೇ ಸಿದ್ಧವಾಗಿರುವಾಗ ಅದನ್ನು ವರ್ತುಲತ್ವ ಎಂಬ ಹೇತುವಿನಿಂದ ಪುನಃ ಸಾಧಿಸುವುದು ಸಿದ್ಧಸಾಧನವಾಗುತ್ತದೆ. ಚಂದ್ರಬಿಂಬವೆಂಬ ಪಕ್ಷದಲ್ಲಿ ವರ್ತುಲವೆಂಬ ಸಾಧ್ಯವು ಸಂದಿಗ್ಧವಾಗಿಲ್ಲ. ಆದ್ದರಿಂದ ಚಂದ್ರಬಿಂಬವು ಪಕ್ಷವಾಗದೇ ಸಿದ್ಧಸಾಧನವೂ ಆಶ್ರಯಾಸಿದ್ಧ ಎನಿಸುತ್ತದೆ.

ಸ್ವರೂಪಾಸಿದ್ಧದಲ್ಲಿ ಹೇತುವು ನೈಸರ್ಗಿಕವಾಗಿಯೇ ಪಕ್ಷದಲ್ಲಿ ಅಸಿದ್ಧವಾಗಿರುತ್ತದೆ. ಶಬ್ದದ ಅನಿತ್ಯತ್ವವನ್ನು ಸಾಧಿಸಲು ಕೊಟ್ಟ ಚಾಕ್ಷುಷತ್ವ ಎಂಬ ಹೇತುವು ಪಕ್ಷವಾದ ಶಬ್ದದಲ್ಲಿ ಸಹಜವಾಗಿಯೇ ಅಸಿದ್ಧವಾಗಿದೆ. ಅನ್ಯ ಉದಾಹರಣೆ: अश्वः पशुः, शृङ्गित्वात्।

41. ಈ ಹಿಂದೆಯೇ 32ನೇ ಪರಿಚ್ಛೇದದಲ್ಲಿ ವಿವರಿಸಿದಂತೆ ಸಾಧನವು ವ್ಯಾಪ್ಯವೂ ಸಾಧ್ಯವು ವ್ಯಾಪಕವೂ ಆಗಿರುತ್ತದೆ. ಆದರೆ ವ್ಯಾಪ್ಯತ್ವಾಸಿದ್ಧದಲ್ಲಿ ಸಾಧನದ ವ್ಯಾಪ್ಯತ್ವವೇ ಅಸಿದ್ಧವಾಗಿರುತ್ತದೆ.

ಸಾಧ್ಯ-ಸಾಧನಗಳ ನಡುವಿನ ಸಂಬಂಧವು ಬಾಹ್ಯವಾದ ಯಾವ ಅಂಶವನ್ನೂ ಅವಲಂಬಿಸದೇ ಸ್ವತಃ ಸಿದ್ಧವಾಗಬೇಕು. ಆದರೆ ವ್ಯಾಪ್ಯತ್ವಾಸಿದ್ಧದಲ್ಲಿ ಸಾಧ್ಯಸಾಧನಗಳ ವ್ಯಾಪ್ತಿಯ ಸಿದ್ಧಿಯು ಅವೆರಡರಿಂದಲೂ ಭಿನ್ನವಾದ ಬಾಹ್ಯ ಅಂಶವೊಂದನ್ನು ಅವಲಂಬಿಸಿರುತ್ತದೆ. ಅಂದರೆ ಹೇತುವು ಸಾಧ್ಯವನ್ನು ಸಾಧಿಸಲು ಸ್ವತಃ ಸಮರ್ಥವಾಗದೇ ಬೇರೊಂದರ ಸಹಾಯವನ್ನು ಅವಲಂಬಿಸಿರುತ್ತದೆ. ಉದಾ: पर्वतो धूमवान्, वह्निमत्वात्। ಎಂಬಲ್ಲಿ ವ್ಯಾಪ್ತಿಸ್ವರೂಪವು यत्र यत्र वह्निः तत्र तत्र धूमः ಎಂದಾಗುತ್ತದೆ. ಇಲ್ಲಿ ಹೇತುವಾದ ವಹ್ನಿಯು 'ವ್ಯಾಪ್ಯ' ಎಂದರೆ ಅಲ್ಪದೇಶವೃತ್ತಿಯಾಗಿರಬೇಕಿತ್ತು. ಆದರೆ ಅದು ಸಾಧ್ಯವಾದ ಧೂಮಕ್ಕಿಂತ ಅಧಿಕದೇಶವೃತ್ತಿಯಾಗಿದೆ. ತಪ್ತಾಯೋಗೋಲಕದಲ್ಲಿ ಅಗ್ನಿಯಿದ್ದರೂ ಧೂಮವಿಲ್ಲ. ಹೀಗೆ ಅಗ್ನಿಯು ಧೂಮದ ಜೊತೆ ನಿಯತಸಾಹಚರ್ಯಸಂಬಂಧವನ್ನು ಹೊಂದದೆ ವ್ಯಾಪ್ತಿಯು ವ್ಯಭಿಚರಿತವಾಗುತ್ತದೆ. ಇಲ್ಲಿ ಸಾಧನವಾದ ಅಗ್ನಿಗೆ ಸಾಧ್ಯವಾದ ಧೂಮವನ್ನು ಎಲ್ಲೆಡೆಯೂ ಸಾಧಿಸುವ ಸ್ವಸಾಮರ್ಥ್ಯವಿರಬೇಕಿತ್ತು. ಆದರೆ ಅಗ್ನಿಯು ಹಾಗೆ ಮಾಡಲು ಅಸಮರ್ಥವಾಗಿ ಬೇರೊಂದು ಅಂಶದ ಅವಲಂಬನೆಯನ್ನು ಪಡೆಯುತ್ತದೆ. ಆ ಅಂಶವೇ ಆರ್ದ್ರೇಂಧನಸಂಯೋಗ. ಅಗ್ನಿಯ ಜೊತೆ ಆರ್ದ್ರವಾದ ಇಂಧನದ ಸಂಬಂಧ ಇರುವಲ್ಲೆಲ್ಲ

ಧೂಮವಿರುತ್ತದೆ. ಈ 'ಆರ್ದ್ರೇಂಧನಸಂಯೋಗ' ಎಂಬ ಬಾಹ್ಯ ಅಂಶವೇ ಉಪಾಧಿ. ಎಲ್ಲೆಲ್ಲಿ ಹೇತುವು ಇಂತಹ ಉಪಾಧಿಸಹಿತವಾಗಿರುವುದೋ ಅಲ್ಲೆಲ್ಲ ಹೇತುವು ವ್ಯಾಪ್ಯತ್ವಾಸಿದ್ಧವಾಗುತ್ತದೆ.

ಸಮೀಪವಿರುವ ವಸ್ತುವಿಗೆ ಸ್ವ-ರೂಪವನ್ನು ಯಾವುದು ವರ್ಗಾಯಿಸುತ್ತದೆಯೋ ಅದು ಉಪಾಧಿ. उप-समीपस्थिते वस्तुनि आदधाति सङ्क्रामयति स्वीयं धर्ममिति उपाधिः। ಸ್ಫಟಿಕದ ಸಮೀಪ ಒಂದು ಕೆಂಪು ಹೂವನ್ನಿಟ್ಟರೆ ಸ್ಫಟಿಕವು ಕೆಂಪಾಗಿ ಕಾಣುತ್ತದೆ. ಈ ರಕ್ತತ್ವ ಸ್ಫಟಿಕದ ಸ್ವಾಭಾವಿಕಧರ್ಮವಲ್ಲ, ಅದು ಔಪಾಧಿಕವಾದುದು.

ಉಪಾಧಿಯು ಸಾಧ್ಯಕ್ಕೆ ವ್ಯಾಪಕವಾಗಿಯೂ ಸಾಧನಕ್ಕೆ ಅವ್ಯಾಪಕವಾಗಿಯೂ ಇರುತ್ತದೆ. ಸಾಧ್ಯವ್ಯಾಪಕತಾ ಎಂದರೆ ಸಾಧ್ಯಕ್ಕಿಂತ ಅಧಿಕದೇಶದಲ್ಲಿರುವುದು ಅಥವಾ ಸಾಧ್ಯ ಇರುವಲ್ಲೆಲ್ಲ ಇರುವುದು (ಸಮವ್ಯಾಪಕ). ಪ್ರಕೃತ ಉದಾಹರಣೆಯಲ್ಲಿ ಆರ್ದ್ರೇಂಧನಸಂಯೋಗ ಎಂಬ ಉಪಾಧಿಯು ಸಾಧ್ಯವಾದ ಧೂಮವಿರುವ ಎಲ್ಲೆಡೆಯೂ ಇರುತ್ತದೆ. ಸಾಧನ ಅವ್ಯಾಪಕತಾ ಎಂದರೆ ಸಾಧನಕ್ಕಿಂತ ಅಲ್ಪದೇಶವೃತ್ತಿಯಾಗಿರುವುದು. ಸಾಧನವಾದ ಅಗ್ನಿಗಿಂತ ಆರ್ದ್ರೇಂಧನಸಂಯೋಗವು ಅಲ್ಪದೇಶವೃತ್ತಿಯಾಗಿದೆ. ಉದಾಹರಣೆಗೆ, ತಪ್ತಾಯೋಗೋಲಕದಲ್ಲಿ ಸಾಧನವಾದ ಅಗ್ನಿಯಿದ್ದು ಆರ್ದ್ರೇಂಧನ ಸಂಯೋಗವಿಲ್ಲ. ಸಾಧನಕ್ಕಿಂತ ಅಲ್ಪದೇಶವೃತ್ತಿಯಾದ ಉಪಾಧಿಯೇ ಸಾಧ್ಯಕ್ಕೆ ವ್ಯಾಪಕವಾಗಿರುವಾಗ ಸಾಧನವು ಪ್ರಕೃತ ಸಾಧ್ಯವನ್ನು ಕುರಿತು ಹೇಗೂ ವ್ಯಾಪಕವಾಗಿದೆ ಎಂಬುದನ್ನು ಸಿದ್ಧಪಡಿಸುತ್ತದೆ. ಆದ್ದರಿಂದ ಸಾಧನವಾದ ವಹ್ನಿಯು ಸಾಧ್ಯವಾದ ಧೂಮವನ್ನು ಕುರಿತು ವ್ಯಾಪ್ಯವಾಗುವ ಸಾಧ್ಯತೆಯೇ ಇಲ್ಲ. ಹೀಗೆ ಸಾಧನವಾದ ವಹ್ನಿಯ ವ್ಯಾಪ್ಯತ್ವ ಅಸಿದ್ಧವಾಗಿ ಅದು ಧೂಮವನ್ನು ಸಾಧಿಸಲಾರದು. ಒಂದು ವೇಳೆ पर्वतो धूमवान्, आर्द्रेन्धनसंयोगे सति वह्निमत्त्वात्। ಎಂದಿದ್ದರೆ ಅದು ಸದನುಮಾನವಾಗುತ್ತಿತ್ತು.

ಉಪಾಧಿಯ ಚತುರ್ವಿಧಗಳು

1) ಕೇವಲಸಾಧ್ಯವ್ಯಾಪಕ ಉಪಾಧಿ: ಈ ಉಪಾಧಿಯು ಸಾಧ್ಯವನ್ನು ಸಂಪೂರ್ಣವಾಗಿ ವ್ಯಾಪಿಸಿರುತ್ತದೆ. पर्वतो धूमवान्, वह्निमत्त्वात् ಎಂಬಲ್ಲಿ ಆರ್ದ್ರೇಂಧನಸಂಯೋಗವು ಈ ವಿಧದ ಉದಾಹರಣೆಯಾಗಿದೆ. ಏಕೆಂದರೆ ಆರ್ದ್ರೇಂಧನಸಂಯೋಗವು ಸಾಧ್ಯವಾದ ಧೂಮದ ಜೊತೆ ಸಾಹಚರ್ಯವನ್ನು ಹೊಂದಿದೆ.

2) ಪಕ್ಷಧರ್ಮಾವಚ್ಛಿನ್ನಸಾಧ್ಯವ್ಯಾಪಕ ಉಪಾಧಿ: ಯಾವ ಉಪಾಧಿಯು ಪಕ್ಷದಲ್ಲಿ ಯಾವ ಸ್ವರೂಪದಲ್ಲಿರುವುದೋ ಆ ಸ್ವರೂಪದಿಂದ ಮಾತ್ರ ಸಾಧ್ಯಕ್ಕೆ ವ್ಯಾಪಕವಾಗಿರುವಂಥದ್ದು. ಉದಾಹರಣೆಗೆ वायुः प्रत्यक्षः, प्रत्यक्षस्पर्शाश्रयत्वात्। ಇಲ್ಲಿ (बहिर्द्रव्यत्वावच्छिन्नप्रत्यक्षत्वव्यापक) उद्भूतरूपवत्त्वम् ಎಂಬುದು ಉಪಾಧಿಯಾಗಿದೆ.

3) ಸಾಧನಾವಚ್ಛಿನ್ನಸಾಧ್ಯವ್ಯಾಪಕ ಉಪಾಧಿ: ಯಾವುದು ಸಾಧನದ ಜೊತೆ ಸಹವರ್ತಿ-ಯಾಗಿದ್ದಾಗ ಮಾತ್ರ ಸಾಧ್ಯಕ್ಕೆ ವ್ಯಾಪಕವಾಗಿರುವುದೋ ಅದು. ಉದಾಹರಣೆ: प्रागभावो विनाशी, जन्यत्वात्। ಇಲ್ಲಿ (जन्यत्वावच्छिन्न अनित्यत्वव्यापक) भावत्वम् ಎಂಬುದು ಉಪಾಧಿ.

4) ಉದಾಸೀನಧರ್ಮಾವಚ್ಛಿನ್ನಸಾಧ್ಯವ್ಯಾಪಕ ಉಪಾಧಿ: ಯಾವುದು ಸ್ವತಂತ್ರವಾಗಿ ಸಾಧ್ಯಕ್ಕೆ

ವ್ಯಾಪಕವಾಗಿರುವುದೋ ಅದು. ಉದಾಹರಣೆ: प्रागभावो विनाशी, प्रमेयत्वात्। ಇಲ್ಲಿಯೂ ಸಹ (जन्यत्वावच्छिन्न अनित्यत्वव्यापक) भावत्वम् ಎಂಬುದು ಉಪಾಧಿಯಾಗಿದೆ.

ವ್ಯಾಪ್ಯತ್ವಾಸಿದ್ಧದ ಅನ್ಯ ಉದಾಹರಣೆ—गर्भस्थ: मित्रातनय: श्याम:, मित्रातनयत्वात्, इतरतनयवत्। ಇಲ್ಲಿ शाकपाकजत्व ಉಪಾಧಿಯಾಗಿದೆ. ಲಕ್ಷಣಸಾಮಾನ್ಯದಲ್ಲಿಯ ದೋಷತ್ರಯಗಳಾದ ಅತಿವ್ಯಾಪ್ತಿ, ಅವ್ಯಾಪ್ತಿ ಮತ್ತು ಅಸಂಭವಗಳೂ ಅಸಿದ್ಧದ ಪ್ರಕಾರದ್ವಯದಲ್ಲಿಯೇ ಅಂತರ್ಭಾವವಾಗುತ್ತವೆ. ಅತಿವ್ಯಾಪ್ತಿಯು ವ್ಯಾಪ್ಯತ್ವಾಸಿದ್ಧದಲ್ಲಿಯೂ, ಅವ್ಯಾಪ್ತಿಯು ಭಾಗಾಸಿದ್ಧದಲ್ಲಿಯೂ (ಸ್ವರೂಪಾಸಿದ್ಧದಲ್ಲಿ), ಅಸಂಭವವು ಸ್ವರೂಪಾಸಿದ್ಧದಲ್ಲಿಯೂ ಸಮಾವೇಶಗೊಳ್ಳುತ್ತವೆ.

42. ಪ್ರತ್ಯಕ್ಷವನ್ನು ಅನುಸರಿಸಿಯೇ ಅನುಮಾನವು ಪ್ರವೃತ್ತವಾಗುವುದರಿಂದ ಪ್ರತ್ಯಕ್ಷವು ಅನುಮಾನಕ್ಕಿಂತ ಬಲವತ್ತರವಾದ ಪ್ರಮಾಣವಾಗಿದೆ. ಬಾಧಿತದಲ್ಲಿ ಸಾಧ್ಯವೊಂದನ್ನು ಸಾಧಿಸಲು ಹೇತುವು ಪ್ರವೃತ್ತವಾಗುವಾಗಲೇ ಪ್ರತ್ಯಕ್ಷಪ್ರಮಾಣದಿಂದ ಆ ಸಾಧ್ಯದ ಅಭಾವವು ಸಿದ್ಧವಾಗಿರುತ್ತದೆ. ಗ್ರಂಥದಲ್ಲಿ ನೀಡಲಾದ ಉದಾಹರಣೆಯಲ್ಲಿ ಸಾಧ್ಯಾಭಾವವಾದ ಉಷ್ಣತ್ವವು ಪ್ರತ್ಯಕ್ಷಪ್ರಮಾಣದಿಂದಲೇ (ಸ್ಪರ್ಶದಿಂದ) ಸಿದ್ಧವಾಗಿದೆ. ಕೆಲವಡೆ ಸಾಧ್ಯಾಭಾವವು ಉಪಮಾನ ಮತ್ತು ಶಬ್ದಪ್ರಮಾಣಗಳಿಂದಲೂ ಸಿದ್ಧವಾಗಿರಬಹುದು.

ಬಾಧಿತ ಮತ್ತು ಸತ್ಪ್ರತಿಪಕ್ಷ ಇವೆರಡರಲ್ಲಿಯೂ ಪ್ರಮಾಣಾಂತರವು ಸಾಧ್ಯಾಭಾವವನ್ನು ಸಾಧಿಸುತ್ತದೆ. ಆದರೆ ಸತ್ಪ್ರತಿಪಕ್ಷದಲ್ಲಿ ಪ್ರಮಾಣಾಂತರವು ಪೂರ್ವಪ್ರಮಾಣಕ್ಕೆ ಸಮಬಲವಾಗಿರುತ್ತದೆ. (ಇದನ್ನು 'ಪ್ರತಿಪಕ್ಷ' ಎಂಬ ಪದವೇ ಸೂಚಿಸುತ್ತದೆ). ಮತ್ತು ಬಾಧಿತದಲ್ಲಿ ಸಾಧ್ಯಾಭಾವವನ್ನು ಸಾಧಿಸುವ ಪ್ರಮಾಣಾಂತರವು ಸಾಮಾನ್ಯವಾಗಿ ಪ್ರತ್ಯಕ್ಷಪ್ರಮಾಣವಾಗಿದ್ದು ಅನುಮಾನಕ್ಕಿಂತ ಬಲವತ್ತರವಾಗಿರುತ್ತದೆ. (ಅದನ್ನು 'ಬಾಧಿತ' ಎಂಬ ಪದ ಸೂಚಿಸುತ್ತದೆ). ಸತ್ಪ್ರತಿಪಕ್ಷದಲ್ಲಿ ಸಾಧ್ಯಾಭಾವವನ್ನು ಸಾಧಿಸುವ ಹೇತ್ವಂತರದಿಂದ ಪೂರ್ವಾನುಮಾನದ ಸಾಧ್ಯವು ಅನಿಶ್ಚಿತವಾಗುಳಿದರೆ ಬಾಧಿತದಲ್ಲಿ ಪ್ರಮಾಣಾಂತರವು ಸಾಧ್ಯವನ್ನು ಪಕ್ಷದಲ್ಲಿ ಪೂರ್ಣವಾಗಿ ಅಲ್ಲಗಳೆಯುತ್ತದೆ.

ಬಾಧಿತ ಹೇತ್ವಾಭಾಸವನ್ನು 'ಕಾಲಾತ್ಯಯಾಪದಿಷ್ಟ' ಎಂದೂ ಕರೆಯುತ್ತಾರೆ. ಹಾಗೆಂದರೆ 'ಉಚಿತ ಕಾಲ ಕಳೆದ ಬಳಿಕ ಉಕ್ತವಾದುದು' ಎಂದರ್ಥ. ಸಾಧ್ಯವು ಸಂದಿಗ್ಧವಾಗಿದ್ದಾಗಲೇ ಹೇತುವನ್ನು ಹೇಳಬೇಕು. ಆದರೆ ಇಲ್ಲಿ ಸಾಧ್ಯಾಭಾವವು (ಅಗ್ನಿಯ ಉಷ್ಣತ್ವ) ಮೊದಲೇ ಜ್ಞಾತವಾಗಿದ್ದು ಬಳಿಕ ಹೇತುವು ಉಕ್ತವಾಗುತ್ತದೆ.

ಈ ಪಂಚ ಹೇತ್ವಾಭಾಸಗಳಲ್ಲಿ ಕೆಲವು ನೇರವಾಗಿ ಅನುಮಿತಿಗೆ ಪ್ರತಿಬಂಧಕವಾದರೆ ಇನ್ನು ಕೆಲವು ಅನುಮಿತಿಗೆ ಕರಣವೆನಿಸಿದ ವ್ಯಾಪ್ತಿಜ್ಞಾನಕ್ಕೆ ಹಾಗೂ ವ್ಯಾಪಾರವೆನಿಸಿದ ಪರಾಮರ್ಶಕ್ಕೆ ಪ್ರತಿಬಂಧಕವಾಗಿವೆ. ಬಾಧಿತ ಹಾಗೂ ಸತ್ಪ್ರತಿಪಕ್ಷ ಎಂಬ ಹೇತ್ವಾಭಾಸಗಳು ನೇರವಾಗಿಯೇ ಅನುಮಿತಿ ಪ್ರತಿಬಂಧಕವಾಗಿವೆ. ಬಾಧಿತದಲ್ಲಿ ಸಾಧ್ಯದ ಅಭಾವವು ನಿಶ್ಚಿತವಾಗಿದ್ದರೆ ಸತ್ಪ್ರತಿಪಕ್ಷದಲ್ಲಿ ಸಾಧ್ಯದ ಅಭಾವಜ್ಞಾನಸಾಧಕವಾದ ಪರಿಕರಗಳಿರುತ್ತವೆ. ಇನ್ನು ಸಾಧಾರಣಸವ್ಯಭಿಚಾರದಲ್ಲಿ ಹೇತುವು ಸಾಧ್ಯದ ಅಭಾವವಿರುವಲ್ಲಿ ತಾನಿರುವ ಮೂಲಕ ವ್ಯಾಪ್ತಿಜ್ಞಾನಪ್ರತಿಬಂಧಕವಾಗಿದೆ. ಅಸಾಧಾರಣ ಹಾಗೂ ಅನುಪಸಂಹಾರಿಗಳಲ್ಲಿ ಹೇತುವು ಸಾಧ್ಯದ ಸಂಶಯಕ್ಕೆ ಕಾರಣವಾಗಿ

ವ್ಯಾಪ್ತಿಜ್ಞಾನಪ್ರತಿಬಂಧಕವಾಗಿದೆ. ವಿರುದ್ಧದಲ್ಲಿ ಸಾಧ್ಯ ಹಾಗೂ ಹೇತುಗಳಿಗೆ ಸಾಹಚರ್ಯವೇ ಇಲ್ಲವಾಗಿ (ಸಾಮಾನಾಧಿಕರಣ್ಯಾಭಾವ) ವ್ಯಾಪ್ತಿಜ್ಞಾನಪ್ರತಿಬಂಧಕತ್ವವಿದೆ. ಆಶ್ರಯಾಸಿದ್ಧ-ಸ್ವರೂಪಾಸಿದ್ಧಗಳಲ್ಲಿ ಹೇತುವು ಪಕ್ಷಧರ್ಮತಾಜ್ಞಾನ ಪ್ರತಿಬಂಧಕವಾಗಿದೆ. ವ್ಯಾಪ್ಯತ್ವಾಸಿದ್ಧದಲ್ಲಿ ಹೇತುವು ಕೆಲವೆಡೆ ಸಾಧ್ಯಾಭಾವವೃತ್ತಿಯಾಗಿ ವ್ಯಾಪ್ತಿಯ ಸಾರ್ವತ್ರಿಕತೆಯನ್ನು ಭಂಗಪಡಿಸುತ್ತದೆ.

ನೈಯಾಯಿಕರು ಈ ಐದು ಹೇತ್ವಾಭಾಸಗಳನ್ನು ಅಂಗೀಕರಿಸಿದರೂ ವೈಶೇಷಿಕರು ಸವ್ಯಭಿಚಾರ ಅಥವಾ ಸಂದಿಗ್ಧ, ವಿರುದ್ಧ, ಅಸಿದ್ಧ ಎಂಬ ಮೂರು ಹೇತ್ವಾಭಾಸಗಳನ್ನು ಮಾತ್ರ ಅಂಗೀಕರಿಸುತ್ತಾರೆ. ಆದ್ದರಿಂದ ಗ್ರಂಥಕಾರನು ಹೇತ್ವಾಭಾಸನಿರೂಪಣೆಯಲ್ಲಿ ಗೌತಮನ ನ್ಯಾಯಸೂತ್ರವನ್ನೇ ಅನುಸರಿಸಿ-ರುವುದು ಸ್ಪಷ್ಟವಾಗುತ್ತದೆ.

ಶಾಸ್ತ್ರಾರ್ಥಸಂಬಂಧಿವಿವೇಚನೆಗಳಲ್ಲಿ ಪ್ರತಿವಾದಿಯ ವಾದಗಳಲ್ಲಿ ದೋಷವನ್ನು ತರ್ಜನೀಕರಿಸಿ ಸ್ವವಾದಮಂಡನೆ ಮಾಡುವಾಗ ಹೇತ್ವಾಭಾಸದ ಜ್ಞಾನವು ಅತ್ಯಂತ ಪ್ರಯೋಜನಕಾರಿಯಾಗಿರುತ್ತದೆ. ಜೊತೆಗೆ ಉಕ್ತಪಂಚಹೇತ್ವಾಭಾಸಗಳಲ್ಲಿ ಸತ್ಪ್ರತಿಪಕ್ಷ, ವ್ಯಾಪ್ಯತ್ವಾಸಿದ್ಧ, ಬಾಧಿತ ಮುಂತಾದವುಗಳು ದರ್ಶನಗಳಲ್ಲಿರುವ ಪರಸ್ಪರ ವೈಷಮ್ಯವನ್ನೂ, ಕೆಲವು ವಿಷಯಗಳು ಸಿದ್ಧಾಂತವಾಗದೆ ಇನ್ನೂ ಹಾಗೆಯೇ ಉಳಿದಿರುವುದನ್ನೂ ಸೂಚಿಸುತ್ತವೆ.

43. 'ಸಂಜ್ಞಾ' ಎಂದರೆ 'ಪದ'. 'ಸಂಜ್ಞಿ' ಎಂದರೆ ಪದದಿಂದ ವಾಚ್ಯವಾದ 'ಅರ್ಥ'. ಅವೆರಡರ ನಡುವಿನ ಸಂಬಂಧವೇ 'ಶಕ್ತಿ'. ಈ ಶಕ್ತಿಜ್ಞಾನವೇ ಉಪಮಿತಿ. ಪದ ಮತ್ತು ಅರ್ಥಗಳ ನಡುವಿನ ಸಂಬಂಧಜ್ಞಾನವು ಆಪ್ತವಾಕ್ಯವಾದ ಶಬ್ದಪ್ರಮಾಣದಿಂದಲೂ ಉಂಟಾಗುವುದರಿಂದ ಉಪಮಿತಿಯ ಲಕ್ಷಣವು ಶಬ್ದಜ್ಞಾನದಲ್ಲಿ ಅತಿವ್ಯಾಪ್ತವಾಗುತ್ತದೆ. ಈ ದೋಷದ ನಿವಾರಣೆಗೆ ಇವೆರಡೂ ಜ್ಞಾನಗಳ ಕರಣಗಳನ್ನು ಗಮನಿಸಬೇಕಾಗುತ್ತದೆ. ಯದ್ಯಪಿ ಪದ ಮತ್ತು ಅರ್ಥಗಳ ಸಂಬಂಧಜ್ಞಾನವು ಶಾಬ್ದದಲ್ಲಿಯೂ ಸಂಭವಿಸುವುದಾದರೂ ಅದಕ್ಕೆ ಕರಣವಾದುದು ಶಬ್ದ. ಉಪಮಿತಿಜ್ಞಾನಕ್ಕೆ ಕರಣವಾದುದು ಉಪಮಾನ (ಸಾದೃಶ್ಯಜ್ಞಾನ). ಶಬ್ದವು ಆಪ್ತವಾಕ್ಯವಾದರೆ ಅಜ್ಞಾತವಾದುದನ್ನು ಅರಿಯಲು ಸಹಾಯಕವಾದ ಪ್ರಜ್ಞಾತವಾದುದರ ಸಾದೃಶ್ಯಜ್ಞಾನವೇ ಉಪಮಾನ. 'ಸಾದೃಶ್ಯ' ಎಂದರೆ तद्भिन्नत्वे सति तद्गतभूयोधर्मवत्त्वम्। ಎಂದರೆ ಒಂದು ವಸ್ತುವಿನಿಂದ ಭಿನ್ನವಾಗಿದ್ದು ಆ ವಸ್ತುವಿನಲ್ಲಿಯ ಗುಣವಿಶೇಷಗಳನ್ನು ಹೊಂದಿರುವಿಕೆ ಎಂದರ್ಥ.

ಉಪಮಿತಿಯಲ್ಲಿ ಉಪಮಾನವು ಕರಣವಾಗಿದ್ದು ಅತಿದೇಶವಾಕ್ಯಾರ್ಥಸ್ಮರಣೆ ವ್ಯಾಪಾರ ವಾಗಿರುತ್ತದೆ. ಅತಿದೇಶವೆಂದರೆ ಏಕತ್ರಜ್ಞಾತವಾದುದನ್ನು ಅನ್ಯತ್ರ ಆರೋಪಿಸುವಿಕೆ: अतिदेशो नाम ये परत्र विहिता: धर्मा: तम् अतीत्य अन्यत्र तेषां देश:।

ಉಪಮಿತಿಜ್ಞಾನ ಉಂಟಾಗುವ ಕ್ರಮ ಹೀಗಿದೆ: ಗವಯಪದಜ್ಞಾನ, ಗವಯಪದಾರ್ಥದ ಅಜ್ಞಾನ, ಆಪ್ತನಿಂದ गोसदृशो गवय: ಎಂಬ ಅತಿದೇಶವಾಕ್ಯಶ್ರವಣ, ಅರಣ್ಯಗಮನ, ಗೋಸದೃಶಪಿಂಡದರ್ಶನ, ಸಾದೃಶ್ಯಜ್ಞಾನ, ಅತಿದೇಶವಾಕ್ಯಾರ್ಥಸ್ಮರಣ, ಗವಯಪದಾರ್ಥಜ್ಞಾನ.

ಉಪಮಾನದಲ್ಲಿ ಮೂರು ಪ್ರಕಾರಗಳಿವೆ: (1) ಸಾದೃಶ್ಯವಿಶಿಷ್ಟಪಿಂಡಜ್ಞಾನ: ಉದಾಹರಣೆ—गोसादृश्यविशिष्ट: गवय:। ಇದು ಗ್ರಂಥದಲ್ಲಿ ಉಕ್ತಪ್ರಕಾರವಾಗಿದೆ.

(2) ಅಸಾಧಾರಣಧರ್ಮವಿಶಿಷ್ಟಪಿಂಡಜ್ಞಾನ: ವಸ್ತುವೊಂದಕ್ಕೆ ಮಾತ್ರ ವಿಶಿಷ್ಟವಾದ ಧರ್ಮಜ್ಞಾನದಿಂದಲೇ ಆ ವಸ್ತುವನ್ನು ಗುರುತಿಸುವಿಕೆ. ಉದಾಹರಣೆ— नासिकाविलसदेकशृङ्ग: खड्ग:। ಮೂಗಿನ ಮೇಲೆ ಒಂದು ಕೊಂಬಿರುವುದೇ ಖಡ್ಗಮೃಗ. (3) ವೈಧರ್ಮ್ಯವಿಶಿಷ್ಟ-ಪಿಂಡಜ್ಞಾನ: ಭಾಗಶಃ ಸದೃಶವಾದ ಒಂದು ವಸ್ತುವಿನಲ್ಲಿ ಇಲ್ಲದಿರುವ ಧರ್ಮವಿಶೇಷಗಳಿಂದ ಇನ್ನೊಂದು ವಸ್ತುವನ್ನು ಗುರುತಿಸುವುದು. ಉದಾಹರಣೆ— उष्ट्र: न अश्ववत् समानपृष्ठ: ह्रस्वग्रीवश्च। ಒಂಟೆಯು ಕುದುರೆಯಂತೆ ನೇರವಾದ ಬೆನ್ನನ್ನು ಮತ್ತು ಗಿಡ್ಡವಾದ ಕುತ್ತಿಗೆಯನ್ನು ಹೊಂದಿರುವುದಿಲ್ಲ.

ವೈಶೇಷಿಕರು ಉಪಮಾನವನ್ನು ಒಂದು ಸ್ವತಂತ್ರಪ್ರಮಾಣವನ್ನಾಗಿ ಅಂಗೀಕರಿಸದೇ ಅದನ್ನು ಅನುಮಾನದಲ್ಲಿಯೇ ಅಂತರ್ಗತಗೊಳಿಸುತ್ತಾರೆ. ವಾಸ್ತವವಾಗಿ ಉಪಮಾನವು ಇತರ ಪ್ರಮಾಣಗಳಿಂದ ಪೋಷಿತವಾಗಿದ್ದುಕೊಂಡು ಪ್ರತ್ಯೇಕ ಅಸ್ತಿತ್ವವನ್ನು ಸಿದ್ಧಿಸಿಕೊಳ್ಳುತ್ತದೆ. ಗ್ರಂಥದಲ್ಲಿ ಉಕ್ತ ಉದಾಹರಣೆಯಲ್ಲಿ गोसदृशो गवय: ಎಂಬ ಆಪ್ತವಾಕ್ಯದಲ್ಲಿ ಶಬ್ದದಿಂದ, ಗವಯಪಿಂಡದಲ್ಲಿ ಗೋಸಾದೃಶ್ಯವು ಪ್ರತ್ಯಕ್ಷದಿಂದ, 'ಇದೇ ಗವಯ' ಎಂಬಲ್ಲಿ ಅತಿದೇಶವಾಕ್ಯ, ಸ್ಮೃತಿ ಹಾಗೂ ಅನುಮಾನಗಳಿಂದ—ಹೀಗೆ ಉಪಮಾನದ ಅವಯವಗಳನ್ನು ಆಯಾ ಪ್ರಮಾಣಗಳಲ್ಲಿ ವಿಲೀನಗೊಳಿಸಬಹುದಾದರೂ ಅಂತ್ಯದಲ್ಲಿ ಉದಯಿಸುವ असौ गवयपदवाच्य: ಎಂಬ ಜ್ಞಾನಕ್ಕೆ ಉಪಮಾನವೇ ಕಾರಣವಾಗಿರುತ್ತದೆ. ಹೀಗೆ ಉಪಮಾನವು ಪ್ರಮಾಣಾಂತರಸಹಕೃತವಾದ ಒಂದು ಸ್ವತಂತ್ರಪ್ರಮಾಣವಾಗಿದೆ. ಅಲ್ಲದೇ ದೈನಂದಿನವ್ಯವಹಾರದಲ್ಲಿ ಕೆಲವು ವಸ್ತುಗಳ ಜ್ಞಾನವು ಪ್ರತ್ಯಕ್ಷ, ಅನುಮಾನ, ಶಬ್ದಗಳಿಂದ ಭಿನ್ನವಾದ ಪ್ರಮಾಣದಿಂದ ಉಂಟಾಗುವುದು ಅನುಭವಸಿದ್ಧವಾಗಿರುವುದೇ ಉಪಮಾನದ ಅಸ್ತಿತ್ವವನ್ನು ಸಮರ್ಥಿಸುತ್ತದೆ.

44. ತಾರ್ಕಿಕರು ಆಪ್ತನಿಂದ ಉಚ್ಚರಿತವಾದ ವಾಕ್ಯವನ್ನು ಸ್ವತಂತ್ರಪ್ರಮಾಣವೆಂದು ಅಂಗೀಕರಿ-ಸುತ್ತಾರೆ. ಆಪ್ತರಲ್ಲಿ ಸರ್ವಜ್ಞ ಮತ್ತು ಅಸರ್ವಜ್ಞ ಎಂದು ದ್ವಿವಿಧ. ಸರ್ವಜ್ಞನಾದ ಆಪ್ತನೆಂದರೆ ಈಶ್ವರ. ಅವನಿಂದ ಉಚ್ಚರಿಸಲ್ಪಟ್ಟಿದ್ದರಿಂದಲೇ ವೇದಗಳು ಪ್ರಮಾಣಗಳಾಗಿವೆ. ಅಸರ್ವಜ್ಞನಾದ ಆಪ್ತನ ವಾಕ್ಯ ಪ್ರಮಾಣವಾಗಲು ಅವನು ಅಂಶತ್ರಯಸಹಿತನಾಗಿರಬೇಕು. ಪ್ರಥಮವಾಗಿ 'ಉಪದೇಶ ವಿಷಯದ ಯಥಾರ್ಥಜ್ಞಾನ' (उपदेशविषयस्य यथार्थज्ञानम्), ಎರಡನೆಯದಾಗಿ 'ತನ್ನ ಯಥಾರ್ಥಜ್ಞಾನವನ್ನು ಅನ್ಯರಿಗೆ ತಿಳಿಸುವ ಅಭಿಲಾಷೆ' (यथार्थज्ञानचिख्यापयिषा) ಮತ್ತು ಮೂರನೆಯದಾಗಿ 'ಅನ್ಯರಿಗೆ ತಿಳಿಸುವಲ್ಲಿ ಪರಿಣತಿ' (वचनाधिकरणपाटवम्). ಇನ್ನೊಂದು ದೃಷ್ಟಿಯಲ್ಲಿ ಆಪ್ತನನ್ನು रागद्वेषादिरहित: यथार्थवक्ता ಎಂದೂ ವ್ಯಾಖ್ಯಾನಿಸಲಾಗಿದೆ.

ಪದವನ್ನು 'ಶಕ್ತಿಸಮನ್ವಿತವಾದುದು' ಎಂದು ಲಕ್ಷಿಸಲಾಗಿದೆ. ಒಂದು ನಿರ್ದಿಷ್ಟಪದ ಒಂದು ನಿರ್ದಿಷ್ಟ ಅರ್ಥವನ್ನೇ ಬೋಧಿಸುವುದು ಶಕ್ತಿ (ಸಂಕೇತ). ಈ ಶಕ್ತಿಯು ಈಶ್ವರೇಚ್ಛಾಧೀನ-ವಾಗಿದೆಯೆಂದು ಪ್ರಾಚೀನನೈಯಾಯಿಕರು ವಾದಿಸುತ್ತಾರೆ. ಆದರೆ ಲೌಕಿಕವ್ಯವಹಾರದಲ್ಲಿ ಪ್ರಯೋಗಿಸಲ್ಪಡುವ ಅಂಕಿತನಾಮಗಳ ಸಂಕೇತಿತಾರ್ಥ ಪರಿವರ್ತನಶೀಲವಾಗಿದ್ದು ಪುರುಷೇಚ್ಛೆಗೆ ಅಧೀನವಾಗಿರುತ್ತದೆ. ಆದ್ದರಿಂದಲೇ ನವೀನನೈಯಾಯಿಕರು ईच्छामात्रं शक्ति: ಎಂದು ಪ್ರಾಚೀನವ್ಯಾಖ್ಯೆಯನ್ನು ಪರಿಷ್ಕರಿಸುತ್ತಾರೆ. ದೀಪಿಕೆಯಲ್ಲಿ ಶಕ್ತಿಯನ್ನು अर्थस्मृत्यनुकूल:

पदपदार्थसम्बन्धः ಎಂದು ವ್ಯಾಖ್ಯಾನಿಸಲಾಗಿದೆ. ಶಕ್ತಿಗೆ ಅಭಿಧಾ, ಇಚ್ಛಾ, ಸಂಕೇತ ಎಂಬ ನಾಮಾಂತರಗಳಿವೆ.

ಶಾಬ್ದಬೋಧದ ವಿಷಯದಲ್ಲಿ ಭಾರತೀಯದರ್ಶನಗಳಲ್ಲಿ ತೀವ್ರವಾದ ಮತಭೇದವಿದೆ. ತಾರ್ಕಿಕರು ಸಂಕೇತವನ್ನೇ ಶಕ್ತಿ ಎಂದು ಒಪ್ಪಿದರೆ ಮೀಮಾಂಸಕರು ಶಕ್ತಿಯು ಪ್ರತ್ಯೇಕಪದಾರ್ಥ ಎಂದು ವಾದಿಸುತ್ತಾರೆ. ಪದಗಳ ಅರ್ಥಾಭಿವ್ಯಕ್ತಿಯು ಅವುಗಳನ್ನು ವಾಕ್ಯದಲ್ಲಿ ಪ್ರಯೋಗಿಸಿದಾಗ ಉಂಟಾಗುವ ಅನ್ವಯದ ಮೂಲಕ ಸಿದ್ಧಿಸುತ್ತದೆ ಎಂಬುದು ಮೀಮಾಂಸಕರ ವಾದ.

पदानामन्वयविशिष्टे शक्तिः ।

देवदत्तः ಎಂಬ ಪದವನ್ನು ಪ್ರಯೋಗಿಸಿದಾಗ ಅರ್ಥವು ಪೂರ್ಣವಾಗುವುದಿಲ್ಲ. ಜೊತೆಗೆ गच्छति ಎಂಬ ಪದವನ್ನು ಸೇರಿಸಿದಾಗ ಎರಡೂ ಪದಗಳ ಸಾನ್ನಿಧ್ಯದಿಂದ देवदत्तकर्तृकगमनक्रिया ಎಂದು ಅರ್ಥವು ಪೂರ್ಣವಾಗುತ್ತದೆ. ಇದನ್ನು ಭಾಟ್ಟಮೀಮಾಂಸಕರು ತಾತ್ಪರ್ಯಾರ್ಥ ಎಂದೂ ಕರೆಯುತ್ತಾರೆ. ವಾಸ್ತವದಲ್ಲಿ ಮೀಮಾಂಸಕರು (ವಿಶೇಷವಾಗಿ ಪ್ರಾಭಾಕರರು) ಕ್ರಿಯಾಪದದ ಉಪಸ್ಥಿತಿಯಲ್ಲಿಯೇ ಇತರೆಲ್ಲ ಕರ್ತೃಕರ್ಮಾದಿಪದಗಳಿಗೆ ಅರ್ಥಸಮಗ್ರತೆ ಪ್ರಾಪ್ತವಾಗುವುದು ಎನ್ನುತ್ತಾರೆ. इतरान्विते शक्तिरिति प्राभाकराः ಎಂದು ದೀಪಿಕೆಯಲ್ಲಿ ಹೇಳಿದ 'ಇತರ' ಎಂಬುದರ ಅರ್ಥ 'ಕ್ರಿಯಾ' ಎಂಬುದಾಗಿದೆ. ಎಂದರೆ क्रियान्विते पदानां शक्तिः ಎಂಬುದು ಮೀಮಾಂಸಕರ ವಾದ. ಇದನ್ನು ಅನ್ವಿತಾಭಿಧಾನವಾದ ಎಂದೂ ಕರೆಯುತ್ತಾರೆ.

ನೈಯಾಯಿಕರು ಈ ವಾದವನ್ನು ನಿರಾಕರಿಸುತ್ತಾರೆ. ಇವರ ಪ್ರಕಾರ ಅನ್ವಯದ ಮೂಲಕ ಶಕ್ತಿ ಸಿದ್ಧಿಸುವುದಿಲ್ಲ; ಬದಲಾಗಿ ಅನ್ವಯವೇ ಶಕ್ತಿ. पदानामन्वय एव शक्तिः । ಉದಾಹರಣೆಗೆ देवदत्तः ಎಂಬ ಪದವು ಪೂರ್ಣಾರ್ಥವನ್ನು ಕೊಡಲು ಅಸಮರ್ಥವಾಗುವುದು ಅದು ಅನನ್ವಿತ ಎಂಬುದಕ್ಕಾಗಿ ಅಲ್ಲ. ಬದಲಾಗಿ ಶಾಬ್ದಬೋಧಕ್ಕೆ ಅಗತ್ಯವಾದ ಆಕಾಂಕ್ಷಾ, ಯೋಗ್ಯತಾ ಹಾಗೂ ಸನ್ನಿಧಿ ಎಂಬವುಗಳು ಇಲ್ಲಿ ಸಿದ್ಧಿಸಿಲ್ಲ. ವಾಕ್ಯವೆಂದರೆ ಶಕ್ತಿಸಮನ್ವಿತವಾದ ಪದಗಳ ಸಮೂಹ. ವಾಕ್ಯದಲ್ಲಿ ಕ್ರಿಯಾ-ವಾಚಕಪದವಿಲ್ಲದಿದ್ದರೂ ಆಕಾಂಕ್ಷಾದಿಗಳಿದ್ದಲ್ಲಿ ಅರ್ಥಬೋಧೆಯಾಗುತ್ತದೆ. ಉದಾಹರಣೆಗೆ काश्यां त्रिभुवनतिलको भूपतिः ಎಂಬಲ್ಲಿ ಕ್ರಿಯಾಪದದ ಅನುಪಸ್ಥಿತಿಯಲ್ಲಿಯೂ ಅರ್ಥ-ಬೋಧೆಯಾಗುತ್ತದೆ.

ಮಗುವೊಂದು ಅನ್ವಯಸಹಿತವಾಗಿಯೇ ಭಾಷೆಯಲ್ಲಿಯ ಪದಗಳನ್ನು ಗ್ರಹಿಸುತ್ತದೆ. ಇದನ್ನೇ ವೃದ್ಧವ್ಯವಹಾರ ಎನ್ನುವುದು. ವೈಯಾಕರಣರಿಗೂ ಸಮ್ಮತವಾದ ಈ ವಾದದ ಪ್ರಕಾರ ಭಾಷೆಯನ್ನು ಕಲಿಯುವ ಪ್ರಕ್ರಿಯೆ ಹೀಗಿರುತ್ತದೆ: गाम् आनय ಎಂದು ಹಿರಿಯನೊಬ್ಬ ಸೇವಕನನ್ನು ಕುರಿತು ನುಡಿದಾಗ ಅದನ್ನು ಕೇಳಿದ ಮಗುವಿಗೆ ಯಾವ ಪದದ ಅರ್ಥವೂ ತಿಳಿಯುವುದಿಲ್ಲ. ಬಳಿಕ ಸೇವಕ ಹಸುವನ್ನು ಕರೆತಂದಾಗ ಅದೇ ಹಿರಿಯ गां बधान ಎಂದು ಆದೇಶಿಸುತ್ತಾನೆ. ಸೇವಕ ಹಸುವನ್ನು ಕಟ್ಟುತ್ತಾನೆ. ಆಗ ಎರಡು ವಾಕ್ಯಗಳಲ್ಲಿಯೂ ಸಮಾನವಾದ गां ಎಂಬ ಪದದ ಅರ್ಥ ಗೋವ್ಯಕ್ತಿ ಎಂಬುದನ್ನು ಮಗುವು ಗ್ರಹಿಸುತ್ತದೆ. ಹಾಗೆಯೇ गां बधान, अश्वं बधान ಎಂಬ ಆದೇಶಗಳಲ್ಲಿ बधान ಎಂಬುದು ಸಮಾನವಾಗಿದ್ದು ತದನುಗುಣವಾಗಿರುವ ಸಮಾನಕ್ರಿಯೆಯನ್ನು ಕಂಡು ಮಗುವು ಅದರ ಅರ್ಥ 'ಕಟ್ಟುವಿಕೆ' ಎಂದು ತಿಳಿಯುತ್ತದೆ. ಹೀಗೆ ಪ್ರತಿಯೊಂದು ಪದವೂ ಇತರ ಪದಗಳೊಡನೆ

ಅನ್ವಿತವಾಗಿಯೇ ಗ್ರಹಿಸಲ್ಪಡುವುದರಿಂದ ತಾರ್ಕಿಕರ अन्वय एव शक्तिः ಎಂಬುದು ಸಾಧುವಾದವಾಗಿ ತೋರುತ್ತದೆ.

ಶಾಬ್ದಬೋಧಕ್ಕೆ ಸಂಬಂಧಿಸಿದಂತೆ ಪಂಚ ವಾದಗಳು ಪ್ರಸಿದ್ಧವಾಗಿವೆ. ಪ್ರಾಚೀನನ್ಯಾಯಿಕರ ಜಾತಿವಿಶಿಷ್ಟವ್ಯಕ್ತಿವಾದ, ನವೀನನ್ಯಾಯಿಕರ ಕೇವಲವ್ಯಕ್ತಿವಾದ, ವೈಯಾಕರಣರ ಜಾತ್ಯಾದಿವಾದ, ಮೀಮಾಂಸಕರ ಜಾತಿವಾದ ಹಾಗೂ ಬೌದ್ಧರ ಅಪೋಹವಾದ.

ವ್ಯವಹಾರದಲ್ಲಿ ಅರ್ಥಕ್ರಿಯಾಕಾರಿಕೆಗಾಗಲಿ ಪ್ರವೃತ್ತಿ-ನಿವೃತ್ತಿಗಾಗಲಿ ಯೋಗ್ಯವಾದುದು ವ್ಯಕ್ತಿಯೇ ಹೊರತು ವ್ಯಕ್ತಿಯಲ್ಲಿರುವ ಜಾತಿ, ಗುಣ, ಕ್ರಿಯಾ ಅಥವಾ ಸಂಜ್ಞೆಗಳಲ್ಲ. गामानय ಎಂಬ ವ್ಯವಹಾರದಲ್ಲಿ ಆನಯನಕ್ರಿಯೆಗೆ ಯುಕ್ತವಾದುದು ಗೋವ್ಯಕ್ತಿಯೇ. ಆದರೆ ಗೋವ್ಯಕ್ತಿ ಹಾಗೂ ಗೋತ್ವಜಾತಿ ಇವೆರಡರ ನಡುವೆ ಸಮವಾಯ ಸಂಬಂಧವಿರುವುದರಿಂದ ಜಾತಿವಿಶಿಷ್ಟವ್ಯಕ್ತಿಯಲ್ಲಿ ಪ್ರಾಚೀನನ್ಯಾಯಿಕರು ಶಕ್ತಿ(ಸಂಕೇತ)ಯನ್ನು ಒಪ್ಪುತ್ತಾರೆ. ಇದಕ್ಕೆ ಭಿನ್ನವಾಗಿ ನವೀನನ್ಯಾಯಿಕರು ವ್ಯಕ್ತಿಯಲ್ಲಿ ಮಾತ್ರ ಸಂಕೇತವಿದೆಯೆನ್ನುತ್ತಾರೆ. ವೈಯಾಕರಣರು ವ್ಯಕ್ತಿಯ ಉಪಾಧಿಗಳಾದ (ವಿಶೇಷಣಗಳಾದ) ಜಾತಿ, ಗುಣ, ಕ್ರಿಯಾ ಹಾಗೂ ಸಂಜ್ಞೆಗಳಲ್ಲಿ ಸಂಕೇತವಿದೆಯೆಂದು ವಾದಿಸುತ್ತಾರೆ. ಮೀಮಾಂಸಕರು ಗುಣ-ಕ್ರಿಯಾ-ಸಂಜ್ಞೆಗಳಲ್ಲಿಯೂ ಜಾತಿಯನ್ನು ಕಲ್ಪಿಸಿ ಜಾತಿಯೊಂದರಲ್ಲಿಯೇ ಸಂಕೇತವನ್ನು ಸಮ್ಮತಿಸುತ್ತಾರೆ. ಸರ್ವವೂ ಕ್ಷಣಿಕ ಎನ್ನುವ ಬೌದ್ಧರು ವ್ಯಕ್ತಿಯ ಇತ್ಯಾತ್ಮಕ ಅಸ್ತಿತ್ವವನ್ನೇ ಒಪ್ಪದಿರುವುದರಿಂದ ಅತದ್ವ್ಯಾವೃತ್ತಿಯೇ ಸಂಕೇತವೆನ್ನುತ್ತಾರೆ, ಎಂದರೆ ಗೋವು ಅಲ್ಲದ್ದು ಯಾವುದು ಅಲ್ಲವೋ ಅದೇ ಗೋವು ಎಂಬುದು ಇವರ ವಾದದ ತಾತ್ಪರ್ಯ.

ಶಕ್ತಿಯನ್ನು ಗ್ರಹಿಸಲು ನೆರವಾಗುವ ಸಾಧನಗಳನ್ನು ಈ ಶ್ಲೋಕ ನಮೂದಿಸುತ್ತದೆ:

शक्तिग्रहो व्याकरणोपमानकोशाप्तवाक्याद् व्यवहारतश्च ।
वाक्यस्य शेषाद्विवृतेर्वदन्ति सान्निध्यतः सिद्धपदस्य वृद्धाः ।।

ಶಾಬ್ದಜ್ಞಾನಕ್ಕೆ ಪದಜ್ಞಾನವೇ ಕರಣವಾಗಿದೆ. ವೃತ್ತಿಜ್ಞಾನಸಹಕೃತವಾದ ಪದಜ್ಞಾನದಿಂದ ಜನಿಸಿದ ಪದಾರ್ಥದ ಉಪಸ್ಥಿತಿಯೇ ವ್ಯಾಪಾರ. ತನ್ಮೂಲಕವಾಗಿ ಜನಿಸುವ ವಾಕ್ಯಾರ್ಥಜ್ಞಾನವೇ ಶಾಬ್ದಜ್ಞಾನ.

ವೃತ್ತಿಯೆಂದರೆ शक्तिलक्षणान्यतरसम्बन्धः ಅಥವಾ विशिष्टार्थाभिधानम्। ವೃತ್ತಿಯಲ್ಲಿ ಅಭಿಧಾ ಮತ್ತು ಲಕ್ಷಣಾ ಎಂದು ಎರಡು ವಿಧಗಳಿವೆ. ಅಭಿಧೆಯು ಸಂಕೇತದಿಂದ ಜನಿಸಿ ಪದದೊಡನೆ ಅವಿನಾಭಾವಸಂಬಂಧದಿಂದ ಇರುತ್ತದೆ. ಇದರಲ್ಲಿ ಯೋಗ, ರೂಢಿ ಮತ್ತು ಯೋಗರೂಢಿ ಎಂದು ಮೂರು ಪ್ರಕಾರಗಳಿವೆ. ಯೋಗವೆಂದರೆ 'ಅವಯವಶಕ್ತಿ', ಎಂದರೆ ಪದದ ವ್ಯುತ್ಪತ್ತಿಗೆ ಅನುಗುಣವಾಗಿ ಅರ್ಥಬೋಧಕಸಾಮರ್ಥ್ಯ. ಉದಾಹರಣೆಗೆ— पाचक ಎಂಬ ಪದವು पच् ಧಾತು ಮತ್ತು ಪ್ರತ್ಯಯ ಸೇರಿ ಉಂಟಾಗಿದ್ದು 'ಪಚನಕರ್ತಾ' ಎಂಬ ತನ್ನ ಮೂಲಾರ್ಥವನ್ನೇ ಬೋಧಿಸುತ್ತದೆ. ರೂಢಿಯೆಂದರೆ 'ಸಮುದಾಯಶಕ್ತಿ'. ರೂಢಪದವು ವ್ಯುತ್ಪತ್ತಿಭಿನ್ನವಾದ ಸಾಂಪ್ರದಾಯಿಕ (Conventional) ಅರ್ಥವನ್ನು ಬೋಧಿಸುತ್ತದೆ. ಉದಾಹರಣೆಗೆ, कुशल ಎಂಬ ಪದವು 'ಚತುರ' ಎಂಬ ಅರ್ಥದಲ್ಲಿ ಪ್ರಸಿದ್ಧವಾಗಿದೆಯೇ ಹೊರತು 'ದರ್ಭೆಯನ್ನು ಕತ್ತರಿಸುವವನು' ಎಂಬ ಅರ್ಥದಲ್ಲಿ ಅಲ್ಲ. ಯೋಗ ಮತ್ತು ರೂಢಿ ಇವೆರಡೂ ಸೇರಿದ್ದೇ ಯೋಗರೂಢ. ಉದಾಹರಣೆ पङ्कज ಎಂಬ ಪದ.

ಯೌಗಿಕವಾಗಿ ಇದಕ್ಕೆ 'ಕೆಸರಿನಲ್ಲಿ ಹುಟ್ಟುವುದು' ಎಂದು ಅರ್ಥವಾದರೆ ರೂಢವಾಗಿ 'ಕಮಲ' ಎಂದು ಅರ್ಥ.

ಲಕ್ಷಣೆಯನ್ನು शक्यसम्बन्धः ಎಂದು ವ್ಯಾಖ್ಯಾನಿಸುತ್ತಾರೆ. ವಾಚ್ಯಾರ್ಥದೊಡನೆ ಸಂಬಂಧ ಉಂಟಾಗುವಿಕೆಯೇ ಲಕ್ಷಣಾ. ತಾತ್ಪರ್ಯಾರ್ಥವು ಬೋಧಿತವಾಗದಿರುವುದೇ ಲಕ್ಷಣಾವೃತ್ತಿಗೆ ಕಾರಣವಾಗಿರುತ್ತದೆ. ತಾತ್ಪರ್ಯವೆಂದರೆ तत्प्रतीतीच्छयोच्चरितत्वम्। ಎಂದರೆ ಒಂದು ನಿರ್ದಿಷ್ಟ ಅರ್ಥವನ್ನು ಬೋಧಿಸುವ ಇಚ್ಛೆಯಿಂದ ವಾಕ್ಯವೊಂದನ್ನು ಉಚ್ಚರಿಸುವಿಕೆ. ಲಕ್ಷಣೆಯಲ್ಲಿ ಜಹಲ್ಲಕ್ಷಣಾ, ಅಜಹಲ್ಲಕ್ಷಣಾ ಮತ್ತು ಜಹದಜಹಲ್ಲಕ್ಷಣಾ ಎಂದು ಮೂರು ಪ್ರಕಾರಗಳಿವೆ. गङ्गायां घोषः ಎಂಬಲ್ಲಿ ಸಂಕೇತಿತವಾದ 'ಗಂಗಾಪ್ರವಾಹದಲ್ಲಿ ಹಳ್ಳಿ' ಎಂಬ ಅರ್ಥವನ್ನು ತ್ಯಜಿಸಿ (ಜಹತ್) गङ्गातटे घोषः ಎಂಬ ಅರ್ಥವನ್ನು ಸ್ವೀಕರಿಸುವಿಕೆ ಜಹಲ್ಲಕ್ಷಣಾ. ಲಕ್ಷ್ಯಾರ್ಥವು ಸಂಕೇತಿತಾರ್ಥವನ್ನು ಒಳಗೊಳ್ಳುವುದು ಅಜಹಲ್ಲಕ್ಷಣಾ. काकेभ्यो दधि रक्ष्यताम् 'ಕಾಗೆಗಳಿಂದ ಮೊಸರು ರಕ್ಷಿಸಲ್ಪಡಲಿ' ಎಂಬಲ್ಲಿ ಸಂಕೇತಿತಾರ್ಥವಾದ 'ಕಾಗೆಯಿಂದ ಮತ್ತು ಲಕ್ಷ್ಯಾರ್ಥವಾದ ನಾಯಿ ಬೆಕ್ಕು ಮುಂತಾದವುಗಳಿಂದ ಮೊಸರು ರಕ್ಷಿಸಲ್ಪಡಲಿ' ಎಂಬ ಅರ್ಥಪ್ರತೀತವಾಗುತ್ತಿದ್ದು ಸಂಕೇತಿತಾರ್ಥವು ಲಕ್ಷ್ಯಾರ್ಥದೊಡನೆ ಸೇರಿರುವುದನ್ನು ಗಮನಿಸಬಹುದು. ಸಂಕೇತಿತಾರ್ಥವನ್ನು ಭಾಗಶಃ ತ್ಯಜಿಸಿ ಭಾಗಶಃ ಸ್ವೀಕರಿಸುವುದು ಜಹದಜಹಲ್ಲಕ್ಷಣಾ. तत्त्वमसि ಎಂಬಲ್ಲಿ तत् ಎಂದರೆ ನಿರ್ಗುಣಬ್ರಹ್ಮ. त्वम् ಎಂದರೆ ಸಗುಣಜೀವ. ಇಲ್ಲಿ ನಿರ್ಗುಣತ್ವ ಮತ್ತು ಸಗುಣತ್ವಗಳನ್ನು ತ್ಯಜಿಸಿ ಜೀವ-ಬ್ರಹ್ಮರಲ್ಲಿ ಅಭೇದವನ್ನು ಕಲ್ಪಿಸಲಾಗಿದೆ. ಇದು ವಿಶೇಷವಾಗಿ ವೇದಾಂತಿಗಳಿಂದ ಅಂಗೀಕೃತವಾಗಿದೆ.

45. 'ಶಬ್ದ'ವನ್ನು ಈಗಾಗಲೇ 'ವಾಕ್ಯ' ಎಂದು ವ್ಯಾಖ್ಯಾನಿಸಲಾಗಿದೆ. ಆದರೆ ಪದಗಳ ಅನಿಯಮಿತವೂ ಅಸಂಬದ್ಧವೂ ಆದ ಜೋಡಣೆಯು ಸಾರ್ಥಕವಾಕ್ಯವನ್ನು ನಿರ್ಮಿಸಲಾರದು. ಭಾಷಾಪ್ರಯೋಗ ಸಾರ್ಥಕವಾಗಬೇಕಾದರೆ ವಕ್ತೃ ಮತ್ತು ಶ್ರೋತೃಗಳು ಶಬ್ದಾರ್ಥಗಳನ್ನು ನಿಯಮತ್ರಯಕ್ಕೆ ಅನುಗುಣವಾಗಿ ಬಳಸಬೇಕಾಗುತ್ತದೆ. ಆ ನಿಯಮಗಳೇ ಆಕಾಂಕ್ಷಾ, ಯೋಗ್ಯತಾ ಮತ್ತು ಸನ್ನಿಧಿ.

ಪದಾಂತರದ ಅನುಪಸ್ಥಿತಿಯಲ್ಲಿ ಒಂದು ಪದವು ಪೂರ್ಣಾರ್ಥವನ್ನು ಬೋಧಿಸಲು ಅಸಮರ್ಥವಾಗಿ ಆ ಅರ್ಥಬೋಧನೆಗೆ ಪದಾಂತರವನ್ನು ಅಪೇಕ್ಷಿಸುತ್ತದೆ. ಇದೇ ಆಕಾಂಕ್ಷಾ. अभिधानापर्यवसानम् ಎಂದೂ ಇದನ್ನು ವ್ಯಾಖ್ಯಾನಿಸಲಾಗಿದೆ. ವಾಕ್ಯದಲ್ಲಿ ಪ್ರಯೋಗಿಸುವ ಕಾರಕ-ಕ್ರಿಯಾಪದಗಳು, ವಿಶೇಷಣ-ವಿಶೇಷ್ಯಗಳು ಪರಸ್ಪರಾವಲಂಬಿಗಳಾಗಿರುತ್ತವೆ. ಉದಾ— देवदत्तः गच्छति ಎಂಬ ಒಂದು ವಾಕ್ಯದಲ್ಲಿ देवदत्तः ಎಂಬ ಕರ್ತೃಪದ गच्छति ಎಂಬ ಪದಾಂತರದ ಅನುಪಸ್ಥಿತಿಯಲ್ಲಿ ಪೂರ್ಣಾರ್ಥವನ್ನು ಕೊಡಲಾರದು. ಆದ್ದರಿಂದ ಅದು ಕ್ರಿಯಾಪದವನ್ನು ಅಪೇಕ್ಷಿಸುತ್ತದೆ. ಹಾಗೆಯೇ ಕ್ರಿಯಾಪದ ಕೂಡ ಕರ್ತೃಪದವನ್ನು ಅಪೇಕ್ಷಿಸುತ್ತದೆ. ವಸ್ತುತಃ ಆಕಾಂಕ್ಷೆಯು ವಕ್ತೃ-ಶ್ರೋತೃನಿಷ್ಠವಾದುದು. ಆದ್ದರಿಂದ ಅದನ್ನು एकपदार्थे तदर्थान्वययोग्यापरार्थस्य यज्ज्ञानं तद्विषयिणीच्छा ಎನ್ನುತ್ತಾರೆ. ಉದಾ—गाम् ಎಂದಾಗ ಶ್ರೋತೃವು किं करोमि ಎಂದು ತಿಳಿಯಲು ಅಪೇಕ್ಷಿಸುತ್ತಾನೆ. ಅವನ ಅಪೇಕ್ಷೆ ಅಥವಾ ಜಿಜ್ಞಾಸೆ आनय ಎಂಬ ಪದವನ್ನು

ಕೇಳುವುದರಿಂದ ನಿರಾಕಾಂಕ್ಷವಾಗುತ್ತದೆ. ಹೀಗೆ ವ್ಯಕ್ತಿನಿಷ್ಠವಾದ ಆಕಾಂಕ್ಷೆಯು ಪದಗಳಲ್ಲಿದೆ ಎನ್ನುವುದು ಔಪಚಾರಿಕ ಎನ್ನಬಹುದು.

आकाङ्क्षा प्रतिपत्तुर्हि जिज्ञासानवसानत: ।
सा हि शब्दार्थयोर्जाता तद्धर्म उपचर्यते ॥

ಯೋಗ್ಯತೆಯನ್ನು एकपदार्थे अपरपदार्थसम्बन्ध: ಎಂದೂ ವಿವರಿಸುತ್ತಾರೆ, ಎಂದರೆ ಒಂದು ಪದದ ಅರ್ಥದಲ್ಲಿ ಇನ್ನೊಂದು ಪದದ ಅರ್ಥವು ಸಮಂಜಸವಾಗಿ ಹೊಂದಿಕೊಳ್ಳುವಿಕೆ. आम्रफलं पिबति, चन्द्रो दहति ಇತ್ಯಾದಿ ವಾಕ್ಯಗಳು ಯೋಗ್ಯತೆಯ ಅಭಾವದಿಂದ ಪ್ರಮಾಣವೆನಿಸುವುದಿಲ್ಲ.

ವ್ಯವಧಾನರಹಿತ ಉಚ್ಚಾರಣೆಯೇ ಸನ್ನಿಧಿ ಅಥವಾ ಆಸತ್ತಿ. ವ್ಯವಧಾನವು ಅನಗತ್ಯ-ಕಾಲವಿಳಂಬ ಮತ್ತು ಅಪ್ರಕೃತಪದಪ್ರಯೋಗ ಎಂಬ ಎರಡು ಅರ್ಥಗಳನ್ನು ಒಳಗೊಂಡಿದೆ. ಇವೆರಡರಲ್ಲಿ ಮೊದಲನೆಯದು ಈಗಾಗಲೇ ಗ್ರಂಥದಲ್ಲಿ ಉಕ್ತವಾಗಿದ್ದು ಸ್ಪಷ್ಟವಾಗಿದೆ. ಅಪ್ರಕೃತಪದಪ್ರಯೋಗಕ್ಕೆ ಉದಾಹರಣೆ— नीलो घट: द्रव्यं पट: । ಇಲ್ಲಿ ನೀಲಿಯ ಪಟ ಎನ್ನುವುದು ವಕ್ತೃವಿನ ತಾತ್ಪರ್ಯ. ಆದರೆ ಘಟ ಮತ್ತು ದ್ರವ್ಯ ಎಂಬ ಅಪ್ರಕೃತಪದಗಳ ವ್ಯವಧಾನದಿಂದ ಸಾನ್ನಿಧ್ಯಾಭಾವವುಂಟಾಗಿದೆ. ಹಾಗೆಯೇ गिरिर्भुक्तमग्निमान् देवदत्तेन ಎಂಬಲ್ಲಿ गिरि: अग्निमान् ಮತ್ತು देवदत्तेन भुक्तम् ಎನ್ನುವುದು ವಕ್ತೃವಿವಕ್ಷೆಯಾಗಿದ್ದರೂ ಪದಗಳ ಕ್ರಮಭಂಗದಿಂದ ಶಾಬ್ದಬೋಧವುಂಟಾಗುವುದಿಲ್ಲ.

ಈಶ್ವರನ ಕರ್ತೃತ್ವವನ್ನು ಅಂಗೀಕರಿಸದ ಮೀಮಾಂಸಕರು ವೇದಗಳು ಅಪೌರುಷೇಯ ಮತ್ತು ನಿತ್ಯವೆಂದು ವಾದಿಸುತ್ತಾರೆ. ಆದರೆ ತಾರ್ಕಿಕರು ಜಗತ್ತಿನ ಕರ್ತೃರೂಪದಲ್ಲಿ 'ಈಶ್ವರ' ಎಂಬ ಪುರುಷವಿಶೇಷವನ್ನು ಅಂಗೀಕರಿಸುತ್ತಾರೆ. ವೇದಗಳು ಈಶ್ವರೋಕ್ತವಾದುದರಿಂದ ಅವು ಪೌರುಷೇಯವೆನ್ನುತ್ತಾರೆ. ಉತ್ಪನ್ನವಾದುದು ಅನಿತ್ಯವೆಂಬ ಅವರ ಸಿದ್ಧಾಂತಕ್ಕನುಗುಣವಾಗಿ ವೇದಗಳೂ ಅನಿತ್ಯವಾಗಿವೆ. ವೇದವಾಕ್ಯನಿಷ್ಠವಾದ ಸ್ಮೃತಿ, ಇತಿಹಾಸ ಮತ್ತು ಪುರಾಣಗಳೂ ತಾರ್ಕಿಕರ ಪ್ರಕಾರ ಪ್ರಮಾಣಗಳಾಗಿವೆ. ಶ್ರುತಿ, ಸ್ಮೃತಿ, ಇತಿಹಾಸ ಮತ್ತು ಪುರಾಣಗಳಲ್ಲಿ ಉತ್ತರೋತ್ತರಕ್ಕಿಂತ ಪೂರ್ವಪೂರ್ವವು ಬಲವತ್ತರವಾಗಿವೆ.

ಬೌದ್ಧ ಹಾಗೂ ಜೈನದರ್ಶನಗಳು ವೇದಪ್ರಾಮಾಣ್ಯವನ್ನು ಅಂಗೀಕರಿಸದಿದ್ದರೂ ಶಬ್ದಪ್ರಮಾಣವನ್ನು ಅಂಗೀಕರಿಸುತ್ತವೆ.

ವೈಶೇಷಿಕರು ಶಬ್ದಪ್ರಮಾಣವು ಅನುಮಾನದಲ್ಲಿಯೇ ಅಂತರ್ಗತವಾಗುತ್ತದೆ ಎಂದು ವಾದಿಸುತ್ತಾರೆ. ಅವರು ತಮ್ಮ ವಾದದ ಸಮರ್ಥನೆಗಾಗಿ ಅನುಮಾನವನ್ನೇ ಆಶ್ರಯಿಸುತ್ತಾರೆ. ಆದರೆ ಆ ಅನುಮಾನವು ವ್ಯಭಿಚಾರ ಮತ್ತು ಅಸಿದ್ಧಗಳೆಂಬ ಹೇತುದೋಷಗಳಿಂದ ಕೂಡಿದೆಯಾಗಿ ಶಬ್ದವನ್ನು ಅನುಮಾನದಲ್ಲಿ ಅಂತರ್ಗತಗೊಳಿಸಲು ಅಸಮರ್ಥವಾಗಿದೆ. ಜೊತೆಗೆ ಶಾಬ್ದಜ್ಞಾನವು अहम् अनुमिनोमि ಎಂಬ ಅನುವ್ಯವಸಾಯ(ಜ್ಞಾನ)ಕ್ಕಿಂತ ಭಿನ್ನವಾದ ಜ್ಞಾನವಾಗಿದೆ. ಆದ್ದರಿಂದ ಶಬ್ದವು ಒಂದು ಪ್ರತ್ಯೇಕಪ್ರಮಾಣವೆಂದು ತಾರ್ಕಿಕರು ಅಂಗೀಕರಿಸುತ್ತಾರೆ.

ತಾರ್ಕಿಕರು ಅಂಗೀಕರಿಸುವ ಪ್ರಮಾಣಚತುಷ್ಟಯವಲ್ಲದೇ ಅರ್ಥಾಪತ್ತಿ, ಅನುಪಲಬ್ಧಿ,

ಸಂಭವ, ಐತಿಹ್ಯ, ಚೇಷ್ಟಾ, ಮತ್ತು ಪರಿಶೇಷಗಳೆಂಬ ಇತರ ಆರು ಪ್ರಮಾಣಗಳನ್ನು ಭಾರತೀಯಚಿಂತಕರು ಅಂಗೀಕರಿಸುತ್ತಾರೆ. ಆದರೆ ಇವು ಉಕ್ತಪ್ರಮಾಣಚತುಷ್ಟಯದಲ್ಲಿಯೇ ಅಂತರ್ಗತವಾಗುತ್ತವೆಯೆಂಬುದು ತಾರ್ಕಿಕರ ಸಿದ್ಧಾಂತ.

ಯಾವುದೇ ಒಂದು ಜ್ಞಾನವುಂಟಾದಾಗ ಅದು ಪ್ರಮಾತ್ಮಕವೋ ಅಥವಾ ಭ್ರಮಾತ್ಮಕವೋ ಎಂದು ನಿರ್ಣೀತವಾಗುವುದು ಪ್ರಮಾಣಗಳ ಆಧಾರದಿಂದ. ಮಾನವನ ಸಕಲ ವ್ಯವಹಾರಗಳಿಗೂ ಮತ್ತು ಅವನ ಜ್ಞಾನದ ನಿಶ್ಚಿತತೆಗೂ ಪೂರಕವಾಗಿ ಪ್ರಮಾಣವೊಂದಿರಬೇಕು. ನಮಗೆ ಉಂಟಾಗುವ ಜ್ಞಾನದ ಸತ್ಯಾಸತ್ಯತೆಗೆ ನಿರ್ಣಾಯಕಗಳಾಗಿ ಪ್ರಮಾಣಗಳ ಆವಶ್ಯಕತೆ ಇದೆ.

## ಪ್ರಾಮಾಣ್ಯವಾದ

ಪ್ರಮಾಣಗಳನ್ನು ಕುರಿತ ಸಿದ್ಧಾಂತಕ್ಕೆ ಸಂಬಂಧಿಸಿದಂತೆ ದೀಪಿಕೆಯಲ್ಲಿ ಅತಿಮಹತ್ತ್ವದ ಚರ್ಚೆ ಕಂಡುಬರುತ್ತದೆ. ಘಟವೊಂದನ್ನು ನೋಡಿದಾಗ अयं घटः ಅಥವಾ घटमहं जानामि ಎಂಬ ಜ್ಞಾನವುಂಟಾಗುವುದಷ್ಟೆ? ಆದರೆ ನಾವು ನಿಜವಾಗಿ ಘಟವನ್ನೇ ನೋಡಿದ್ದೇವೆ ಎಂಬುದು ನಮಗೆ ತಿಳಿಯುವುದು ಹೇಗೆ? ನಾವು ಘಟವಲ್ಲದ್ದನ್ನು ಕಂಡು ಘಟವೆಂದು ಗ್ರಹಿಸಿರಬಾರದೇಕೆ? ಎಂದರೆ ಜ್ಞಾನದ ಯಥಾರ್ಥತೆ (ಪ್ರಮಾ) ಹಾಗೂ ಅಯಥಾರ್ಥತೆ (ಅಪ್ರಮಾ ಅಥವಾ ಭ್ರಮ)ಗಳ ನಡುವೆ ವ್ಯಾವಹಾರಿಕವಾಗಿ ಪೃಥಕ್ಕರಣ ಹೇಗೆ ಸಾಧ್ಯ? ನಾವು ಘಟದ ನೈಜತೆಯನ್ನು ಕಂಡಿರಲೂಬಹುದು ಅಥವಾ ಕಾಣದಿರಲೂಬಹುದು. ನಾವು ಕಂಡಿದ್ದು ನಿಜವೋ ಮಿಥ್ಯೆಯೋ ಎನ್ನುವುದಕ್ಕೆ ಆಧಾರವೇನು? 'ಪ್ರಮಾ' ಎಂಬುದರ ಲಕ್ಷಣವನ್ನು तद्वति तत्प्रकारकं ज्ञानम् ಎಂದು ಈಗಾಗಲೇ ನೀಡಲಾಗಿದೆ. ಆದರೆ ಈ ಲಕ್ಷಣದಿಂದ ನಿರ್ದಿಷ್ಟಜ್ಞಾನವೊಂದು ಪ್ರಮೆಯೋ ಭ್ರಮವೋ ಎಂದು ನಿರ್ಧರಿಸಲಾಗದು ಮತ್ತು ಈ ನಿರ್ಧಾರಕ್ಕೆ ಬಂದ ವಿನಾ ನಮ್ಮ ಜ್ಞಾನದ ನೈಜತೆ ಸಿದ್ಧವಾಗುವುದಿಲ್ಲ. ಇದನ್ನು ಸಿದ್ಧಪಡಿಸುವ ವಾದಕ್ಕೆ "ಪ್ರಾಮಾಣ್ಯವಾದ" ಎಂದು ಹೆಸರು.

ಜ್ಞಾನದ ನೈಜತೆ ಅಥವಾ ಯಥಾರ್ಥತೆಗೆ ಸಂಬಂಧಿಸಿ ಎರಡು ವಾದಗಳಿವೆ. ಜ್ಞಾನದ ನೈಜತೆಯು ಸ್ವತಃ ಸಿದ್ಧವಾದುದು; ಅದು ತನ್ನನ್ನು ಸಮರ್ಥಿಸಿಕೊಳ್ಳಲು ಬೇರೆ ಪ್ರಮಾಣವನ್ನು ಆಧರಿಸ- ಬೇಕಿಲ್ಲ ಎಂಬುದು ಒಂದು ವಾದ. ಜ್ಞಾನವು ಸ್ವತಃ ಪ್ರಮಾಣವಲ್ಲ; ಪರತಃ ಪ್ರಮಾಣ ಎಂಬು- ದಿನ್ನೊಂದು. ಈ ಸಂದರ್ಭದಲ್ಲಿ ಮಾಧವಾಚಾರ್ಯರು ಉದ್ಧರಿಸಿದ ಎರಡು ಶ್ಲೋಕಗಳು ಇಲ್ಲಿ ಉಲ್ಲೇಖನೀಯ:

प्रमाणत्वाप्रमाणत्वे स्वतः साङ्ख्याः समाश्रिताः ।<br>
नैयायिकास्ते परतः सौगताश्चरमं स्वतः ॥<br>
प्रथमं परतः प्राहुः प्रामाण्यं वेदवादिनः ।<br>
प्रमाणत्वं स्वतः प्राहुः परतश्चाप्रमाणताम् ॥

ಪ್ರಮಾಣ-ಅಪ್ರಮಾಣಗಳೆರಡೂ ಸ್ವತಃಸಿದ್ಧ ಎಂದು ಸಾಂಖ್ಯರು ವಾದಿಸುತ್ತಾರೆ. ನೈಯಾಯಿಕರು ಅವೆರಡೂ ಪರತಃಸಿದ್ಧಗಳು ಎನ್ನುತ್ತಾರೆ. ಬೌದ್ಧರು ಪ್ರಮಾಣವು ಪರತಃಸಿದ್ಧವೂ

ಅಪ್ರಮಾಣವು ಸ್ವತಃಸಿದ್ಧವೂ ಆಗಿದೆಯೆನ್ನುತ್ತಾರೆ. ಮೀಮಾಂಸಕರು ಪ್ರಾಮಾಣ್ಯ ಸ್ವತಃಸಿದ್ಧವೂ ಅಪ್ರಾಮಾಣ್ಯವು ಪರತಃಸಿದ್ಧವೂ ಆಗಿದೆಯೆಂದು ವಾದಿಸುತ್ತಾರೆ.

ದೀಪಿಕೆಯು ಮೀಮಾಂಸಕರ ವಾದವನ್ನು ಪೂರ್ವಪಕ್ಷವಾಗಿ ವಿವರಿಸಿದೆ. ಮೀಮಾಂಸಕರ ಪ್ರಕಾರ ಪ್ರಾಮಾಣ್ಯದ ಸ್ವತಸ್ತ್ವವು ಹೀಗೆ ವ್ಯಾಖ್ಯಾನಿಸಲ್ಪಟ್ಟಿದೆ:

तदप्रामाण्याग्राहकयावज्ज्ञानग्राहकसामग्रीग्राह्यत्वम्।

ಜ್ಞಾನದ ಉತ್ಪತ್ತಿಗೆ ಯಾವವು ಸಾಧನಗಳೋ ಅವೇ ಜ್ಞಾನದ ನೈಜತೆಯನ್ನೂ ಸಿದ್ಧಗೊಳಿಸುತ್ತವೆ. ಇದಕ್ಕೆ ಸಂಬಂಧಿಸಿ ಮೀಮಾಂಸಕರಲ್ಲಿಯೇ ಸೂಕ್ಷ್ಮ ಮತಭೇದಗಳಿವೆ. ಗುರುಮತ ಅಥವಾ ಪ್ರಾಭಾಕರ ಮೀಮಾಂಸಕರ ಪ್ರಕಾರ घटमहं जानामि ಎಂಬ ವ್ಯವಸಾಯವು ಸ್ವಪ್ರಕಾಶರೂಪಿಯಾದುದರಿಂದ ಅದು ತನ್ನ ಮೂಲಕವೇ ತನ್ನ ಪ್ರಾಮಾಣ್ಯವನ್ನೂ ಗ್ರಹಿಸುತ್ತದೆ. ಮುರಾರಿಮಿಶ್ರ ಎಂಬ ಮೀಮಾಂಸಕನ ಪ್ರಕಾರ अयं घटः ಎಂಬ ಜ್ಞಾನದ ಬಳಿಕ घटत्वेन घटमहं जानामि ಎಂಬ ಅನುವ್ಯವಸಾಯ ಉಂಟಾಗುತ್ತದೆ. ಭಾಟ್ಟಮತದಲ್ಲಿ ಜ್ಞಾನವು ಅತೀಂದ್ರಿಯವಾದುದರಿಂದ ಜ್ಞಾತತಾಲಿಂಗಕ ಅನುಮಿತಿಯ ಮೂಲಕ ಪ್ರಥಮಜ್ಞಾನಗ್ರಹಣದ ಸಂದರ್ಭದಲ್ಲಿಯೇ ಅದರ ಪ್ರಾಮಾಣ್ಯವೂ ಗ್ರಹಿಸಲ್ಪಡುತ್ತದೆ.

ಮೀಮಾಂಸಕರ ಈ ಪೂರ್ವಪಕ್ಷಕ್ಕೆ ನೈಯಾಯಿಕರ ಉತ್ತರ ಹೀಗಿದೆ. ಪ್ರಾಮಾಣ್ಯವು ಸ್ವತಃ ಪ್ರಕಾಶಕವಾಗಿದ್ದಲ್ಲಿ ಹಾಗೂ ಜ್ಞಾನದ ಜೊತೆಯೇ ಗ್ರಹಿಸಲ್ಪಟ್ಟಲ್ಲಿ ಯಾವುದೇ ಸಂದಿಗ್ಧಜ್ಞಾನಕ್ಕೆ ಆಸ್ಪದವೇ ಇರುತ್ತಿರಲಿಲ್ಲ. ಆದ್ದರಿಂದ ಯಾವುದೇ ಜ್ಞಾನದ ನೈಜತೆಯು ಕೇವಲ ಅನುಮಾನದಿಂದಲೇ ಸಿದ್ಧವಾಗುತ್ತದೆ. ಉದಾಹರಣೆಗೆ, ಮೊದಲು ನಾವು 'ನೀರನ್ನು ಕಂಡಿದ್ದೇವೆ' ಎಂದು ಭಾವಿಸಿದಾಗ ಅದರ ಕುರಿತು ಇಚ್ಛೆಯುಂಟಾಗುತ್ತದೆ. ಇಚ್ಛೆಯು ಪ್ರವೃತ್ತಿಗೆ ಕಾರಣವಾಗುತ್ತದೆ. ವಾಸ್ತವಿಕವಾಗಿ ಅಲ್ಲಿ ನೀರಿದ್ದಲ್ಲಿ ಪ್ರವೃತ್ತಿ ಶಾಂತವಾಗಬೇಕು. ಒಂದು ವೇಳೆ ನಾವು 'ನೀರು' ಎಂದುಕೊಂಡಿದ್ದು ಮರೀಚಿಕೆಯಾದಲ್ಲಿ ಅದು ನಮ್ಮ ಪ್ರವೃತ್ತಿಯನ್ನು ಶಾಂತಗೊಳಿಸಲಾರದು. ಹೀಗೆ ಪ್ರವೃತ್ತಿಯ ಉಪಶಮನ ಎಂಬುದು ಜ್ಞಾನದ ನೈಜತೆಯನ್ನು ನಿರ್ಧರಿಸುವ ಬಾಹ್ಯಪ್ರಮಾಣವಾಗಿದೆ. ಆದ್ದರಿಂದ ಜ್ಞಾನವು ಪರತಃಪ್ರಮಾಣ. ಹಾಗೆಯೇ ಶಬ್ದದ ಪ್ರಾಮಾಣ್ಯವೂ ಕೂಡ ಬಾಹ್ಯ ಅರ್ಥದೊಡನೆ ಯಥಾರ್ಥವಾಗಿ ಹೊಂದಿಕೊಂಡಲ್ಲಿ ಮಾತ್ರ ಸಿದ್ಧಿಸುತ್ತದೆ.

ಜ್ಞಾನದ ನೈಜತೆಗೆ ಪ್ರವೃತ್ತಿಜನಕತ್ವವು ಪ್ರಮಾಣವಾಗಿದ್ದಲ್ಲಿ ಈ ಮುಂದಿನ ದೋಷವು ಸಂಭವಿಸಬಹುದೆಂದು ಪ್ರಾಭಾಕರಮೀಮಾಂಸಕರು ವಾದಿಸುತ್ತಾರೆ. ಶುಕ್ತಿಯಲ್ಲಿ ರಜತದ ಮಿಥ್ಯಾಜ್ಞಾನವುಂಟಾದಾಗ ಆ ರಜತವನ್ನು ಪಡೆಯುವ ಪ್ರವೃತ್ತಿ ಉಂಟಾಗುತ್ತದೆ. ಆಗ शुक्ताविदं रजतम् ಎಂಬ ಜ್ಞಾನವನ್ನು 'ಪ್ರಮಾ' ಎಂದು ಗ್ರಹಿಸಬೇಕಾದೀತು. ಇದಕ್ಕೆ ನೈಯಾಯಿಕರ ಉತ್ತರ ಹೀಗಿದೆ: ಶುಕ್ತಿಯಲ್ಲಿ ರಜತದ ಮಿಥ್ಯಾಜ್ಞಾನವು ನೈಜವೆಂದು ತೋರುವುದು ಶುಕ್ತಿಯ ಯಥಾರ್ಥಜ್ಞಾನವಾಗುವವರೆಗೆ ಮಾತ್ರ. ಈ ಯಥಾರ್ಥಜ್ಞಾನವಾದ ಬಳಿಕ ರಜತಜ್ಞಾನವು ಪ್ರಮಾ ಆಗಿರುವುದಿಲ್ಲ. ಏಕೆಂದರೆ ಪ್ರಮಾ ಎಂಬುದರ ಲಕ್ಷಣವೇ तद्वति तत्प्रकारकं ज्ञानम् ಎಂಬುದಾಗಿದೆ. ಇದಕ್ಕೆ 'ಅನ್ಯಥಾಖ್ಯಾತಿವ್ಯವಸ್ಥಾಪನ' ಎನ್ನುತ್ತಾರೆ.

46. ಯಥಾರ್ಥಾನುಭವದ ನಿರೂಪಣೆಯು ಅದರ ಪ್ರತಿಮುಖವಾದ ಅಯಥಾರ್ಥ ಅನುಭವದ ನಿರೂಪಣೆಯಿಲ್ಲದೇ ಸಮಗ್ರವಾಗಲಾರದು. ಆದ್ದರಿಂದ ಯಥಾರ್ಥಾನುಭವಕ್ಕೆ ವ್ಯತಿರೇಕದ್ವಾರಾ ಸಹಕಾರಿಯಾದ ಅಯಥಾರ್ಥಾನುಭವವನ್ನು ಗ್ರಂಥಕಾರನು ನಿರೂಪಿಸುತ್ತಾನೆ.

ಅಯಥಾರ್ಥವು ಅನಾಹಾರ್ಯ (ಅನುದ್ದೇಶಪೂರ್ವಕ) ಮತ್ತು ಆಹಾರ್ಯ (ಉದ್ದೇಶ ಪೂರ್ವಕ) ಎಂದು ಮೂಲಭೂತವಾಗಿ ಎರಡು ವಿಧ. ಮೊದಲನೆಯದು 'ಸಂಶಯ' ಮತ್ತು 'ವಿಪರ್ಯಯ'ಗಳೆಂಬ ಪ್ರಭೇದಗಳಾದರೆ ಎರಡನೆಯದು 'ತರ್ಕ' ಎಂಬ ಪ್ರಭೇದವಾಗುತ್ತದೆ.

ಸಂಶಯದ ಲಕ್ಷಣದಲ್ಲಿ 'ಏಕ' ಎಂಬ ಪದವು इमौ घटपटौ ಎಂಬ ಸಮೂಹಾಲಂಬನದಲ್ಲಿ ಅತಿವ್ಯಾಪ್ತಿಯನ್ನು ನಿವಾರಿಸುತ್ತದೆ. घटो द्रव्यम् ಎಂಬಲ್ಲಿ ಅತಿವ್ಯಾಪ್ತಿನಿವಾರಣೆಗಾಗಿ विरुद्ध ಎಂಬ ಪದವಿದೆ. पटत्वाविरुद्धघटत्ववान् ಎಂಬಲ್ಲಿ ಉಂಟಾಗುವ ಅತಿವ್ಯಾಪ್ತಿಯನ್ನು नाना ಎಂಬ ಪದವು ನಿವಾರಿಸುತ್ತದೆ. ಹೀಗೆ ಒಂದು ಧರ್ಮಿ, ಅನೇಕ ಧರ್ಮಗಳು ಹಾಗೂ ಅವು ವ್ಯಧಿಕರಣಧರ್ಮಗಳಾಗಿರುವಿಕೆ (ಒಂದೇ ಅಧಿಕರಣದ ಧರ್ಮಗಳಾಗುವುದು ಅಸಾಧ್ಯವಾಗಿರುವಿಕೆ) ಈ ಮೂರು ಅಂಶಗಳನ್ನು ಸಂಶಯವು ಒಳಗೊಂಡಿರುತ್ತದೆ. ಸಂಶಯವನ್ನು एकस्मिन् धर्मिणि विरुद्धनानाकोटिकं ज्ञानम् ಎಂದೂ ವ್ಯಾಖ್ಯಾನಿಸುತ್ತಾರೆ. ('ಕೋಟಿ' ಎಂದರೆ ವಿಷಯ ಎಂದರ್ಥ)

**ಸಂಶಯದ ತ್ರಿವಿಧಗಳು**

1) विशेषादर्शने सति समानधर्मदर्शनजः। ವಿಶೇಷದ ದರ್ಶನವಾಗದೇ ಸಮಾನಧರ್ಮದ ದರ್ಶನದಿಂದ ಉಂಟಾದುದು. ಉದಾಹರಣೆಗೆ, 'ಕಂಬವೋ ಮನುಷ್ಯನೋ' ಎಂಬಲ್ಲಿ ಎದುರಿಗಿರುವ ಒಂದು ವಸ್ತುವಿನಲ್ಲಿ ಇದು ಕಂಬವೆಂದು ನಿಶ್ಚಯಿಸುವ ವಕ್ರತೆ ಅಥವಾ ಪೊಟರೆಗಳೆಂಬ ಅಥವಾ ಇದು ಮನುಷ್ಯ ಎಂದು ನಿಶ್ಚಯಿಸುವ ತಲೆ ಕೈ ಕಾಲುಗಳೆಂಬ ಯಾವ ವಿಶೇಷವನ್ನೂ ಗ್ರಹಿಸದೇ ಇಬ್ಬರಿಗೂ ಸಮಾನವಾದ 'ಎತ್ತರವಾಗಿರುವಿಕೆ' ಒಂದನ್ನೇ ಕಂಡು ಉಂಟಾಗುವ ಸಂಶಯಪ್ರಕಾರ ಇದು.

2) विशेषादर्शने सति विप्रतिपत्तिजः। ವಿಶೇಷದ ದರ್ಶನವಾಗದೇ ವಿಪ್ರತಿಪತ್ತಿಯಿಂದ ಉಂಟಾದುದು. ಉದಾಹರಣೆಗೆ, ಶಬ್ದವು ನಿತ್ಯವೋ ಅನಿತ್ಯವೋ ಎಂದು ವಾದಿಸುತ್ತ ಮೀಮಾಂಸಕರು ಹಾಗೂ ನೈಯಾಯಿಕರು ಶಬ್ದದ ನಿತ್ಯತೆ, ಅನಿತ್ಯತೆಗಳನ್ನು ಸಪ್ರಮಾಣವಾಗಿ ಮಂಡಿಸುವಾಗ ಅವರ ವಿಪ್ರತಿಪತ್ತಿಗಳಿಂದ ತಟಸ್ಥಶ್ರೋತೃವಿಗೆ ಶಬ್ದವು ನಿತ್ಯವೋ ಅನಿತ್ಯವೋ ಎಂಬ ಸಂಶಯವುಂಟಾಗುತ್ತದೆ.

3) विशेषादर्शने सति असाधारणधर्मजः। ವಿಶೇಷದ ದರ್ಶನವಾಗದೇ ಅಸಾಧಾರಣ ಧರ್ಮದ ದರ್ಶನದಿಂದ ಉಂಟಾದುದು. ಉದಾಹರಣೆಗೆ, 'ಭೂಮಿಯು ನಿತ್ಯವೋ ಅಥವಾ ಅನಿತ್ಯವೋ?' (भूः नित्या उत अनित्या). ಸಕಲ ನಿತ್ಯವಾದವುಗಳಿಂದ ವ್ಯಾವೃತ್ತವಾದ ಕಾರ್ಯ-ಪೃಥಿವಿಯು ಗಂಧವತ್ವಸಂಬಂಧದಿಂದ ಅನಿತ್ಯವೋ ಅಥವಾ ಸಕಲ ಅನಿತ್ಯವಾದವುಗಳಿಂದ ವ್ಯಾವೃತ್ತ-ವಾದ ಪರಮಾಣುರೂಪಿ ಕಾರಣಪೃಥಿವೀ ಗಂಧವತ್ವಸಂಬಂಧದಿಂದ ನಿತ್ಯವೋ ಎಂಬ ಸಂಶಯ.

ಒಂದು ವಸ್ತುವಿನಲ್ಲಿ ವಿಶೇಷಣವಲ್ಲದ ಧರ್ಮವು ಆ ವಸ್ತುವಿನ ಜ್ಞಾನದಲ್ಲಿ ಪ್ರಕಾರವಾಗಿ ತೋರುವುದೇ ವಿಪರ್ಯಯ. ರಜತತ್ವವಿಲ್ಲದ ಶುಕ್ತಿಯ ಜ್ಞಾನದಲ್ಲಿ ರಜತತ್ವವು ಪ್ರಕಾರವಾಗಿ ತೋರಿದರೆ ಅದು ವಿಪರ್ಯಯ.

ಸಂಶಯದ ಉಪಶಾಂತಿಯೇ ತರ್ಕದ ಪ್ರಯೋಜನ. ತರ್ಕವು ಕಾರಣಸರಣಿಯನ್ನು ಉಲ್ಲೇಖಿಸಿ ವಿಕಲ್ಪದ್ವಯದಲ್ಲಿ ಒಂದನ್ನು ಸತ್ಯವೆಂದು ನಿರ್ಧರಿಸಲು ಸಹಕಾರಿಯಾಗಿ ಇನ್ನೊಂದರ ಅಸಂಬದ್ಧತೆಯನ್ನು ಖಚಿತಪಡಿಸುತ್ತದೆ. ಹೀಗೆ ಯಥಾರ್ಥಜ್ಞಾನ ಅಸಂಭವನೀಯವೆನಿಸಿದಾಗ ಕಾರಣಗಳ ಉಲ್ಲೇಖದ ಮೂಲಕ ಯಥಾರ್ಥಜ್ಞಾನ (ವಿಶೇಷವಾಗಿ ಅನುಮಿತಿ) ಉಂಟಾಗಲು ಸಹಕಾರಿಯಾದುದೇ ತರ್ಕ. ಆದರೆ ತರ್ಕವೇ ಯಥಾರ್ಥಜ್ಞಾನವಲ್ಲ.

ಉದಾಹರಣೆಗೆ—ಒಬ್ಬನು पर्वतो वह्निमान्, धूमवत्त्वात्। ಎಂದು ಸದನುಮಾನಪ್ರಯೋಗ ಮಾಡುತ್ತಾನೆ. ಆಗ ಪ್ರತಿವಾದಿಯು ಧೂಮಕ್ಕೆ ಅಗ್ನಿಯು ಕಾರಣವಲ್ಲವೆಂದು ಅಪ್ರಯೋಜಕ ಶಂಕೆಯನ್ನು ಮಾಡುತ್ತಾನೆ. ಅಂದರೆ धूम: अस्तु वह्निर्मास्तु ಎನ್ನುತ್ತಾನೆ ಮತ್ತು ಧೂಮಾಗ್ನಿಗಳ ನಡುವಿನ ಅನ್ವಯವ್ಯಾಪ್ತಿಯನ್ನು ಒಪ್ಪುವುದಿಲ್ಲ. ಆಗ ವಾದಿಯು ಧೂಮಾಗ್ನಿಗಳ ನಡುವಿನ ಕಾರ್ಯಕಾರಣ ಸಂಬಂಧವನ್ನು ವ್ಯತಿರೇಕವಿಧಾನದಿಂದ ಸಾಧಿಸತೊಡಗುತ್ತಾನೆ. यदि पर्वतो वह्निमान् न स्यात् तर्हि धूमवान् अपि न स्यात् ಎನ್ನುತ್ತಾನೆ. ಪ್ರತಿವಾದಿಯು ಇದನ್ನೂ ಅಂಗೀಕರಿಸದಿದ್ದರೆ ಅಗ್ನಿಯ ಅಭಾವವಿರುವ ಆದರೆ ಧೂಮವಿರುವ ಒಂದು ದೃಷ್ಟಾಂತವನ್ನು ತೋರಿಸುವಂತೆ ಹೇಳುತ್ತಾನೆ. ಇದು ಅಸಾಧ್ಯವಾದುದರಿಂದ यत्र यत्र वह्न्यभाव: तत्र तत्र धूमाभाव: ಎಂಬುದನ್ನು ಪ್ರತಿವಾದಿಯು ಅಂಗೀಕರಿಸಬೇಕಾಗುತ್ತದೆ. ತನ್ಮೂಲಕ पर्वतो वह्न्यभाववान् ಎಂದೂ, ಬಳಿಕ पर्वतो धूमाभाववान् ಎಂದೂ ಅನಿವಾರ್ಯವಾಗಿ ಅಂಗೀಕರಿಸಬೇಕಾಗುತ್ತದೆ. ಆದರೆ ಧೂಮವು ಎದುರಿಗೆ ಪ್ರತ್ಯಕ್ಷವಾಗಿ ಕಾಣುತ್ತಿರುವಾಗ पर्वतो धूमाभाववान् ಎನ್ನುವುದು ಅಯಥಾರ್ಥಾನುಭವವಾಗುತ್ತದೆ. ಆ ಮೂಲಕ ಉಂಟಾಗುವ पर्वतो वह्न्यभाववान् ಎಂಬ ಜ್ಞಾನವೂ ಅಯಥಾರ್ಥವೇ ಆಗುತ್ತದೆ. ಹೀಗೆ ವ್ಯಾಪ್ಯವಾದ ವಹ್ನ್ಯಭಾವದಿಂದ (व्याप्यारोप:) ವ್ಯಾಪಕವಾದ ಧೂಮಾಭಾವವನ್ನು (व्यापकारोप:) ಸಾಧಿಸುವುದೇ ತರ್ಕ. ಈ ಮೂಲಕ ವಾದಿಯು ಧೂಮಾಗ್ನಿಗಳ ನಡುವಿನ ಕಾರ್ಯಕಾರಣ ಸಂಬಂಧವನ್ನು ಸ್ಥಾಪಿಸುತ್ತಾನೆ.

ತರ್ಕದಲ್ಲಿ ಆತ್ಮಾಶ್ರಯ, ಅನ್ಯೋನ್ಯಾಶ್ರಯ, ಚಕ್ರಕ, ಅನವಸ್ಥಾ ಮತ್ತು ತದನ್ಯಬಾಧಿತಾರ್ಥ-ಪ್ರಸಂಗ ಎಂಬ ಐದು ವಿಧಗಳಿದ್ದು ಗ್ರಂಥದಲ್ಲಿ ಕೊಟ್ಟ ಉದಾಹರಣೆಯು ಐದನೆಯ ಪ್ರಭೇದಕ್ಕೆ ಅನ್ವಯಿಸುತ್ತದೆ. ಸವ್ಯಭಿಚಾರ ಮತ್ತು ಅಸಿದ್ಧಹೇತ್ವಾಭಾಸದ ಉದಾಹರಣೆಗಳು ಉಳಿದ ನಾಲ್ಕು ಪ್ರಭೇದಗಳಿಗೆ ಅನ್ವಯಿಸುತ್ತವೆ.

47. ಅನುಮಿತಿಯ ಸತ್ಯತೆ ಪರಾಮರ್ಶದ ಸತ್ಯತೆಯನ್ನು, ಶಾಬ್ದದ ಸತ್ಯತೆ ವಾಕ್ಯದ ಸತ್ಯತೆಯನ್ನು ಅವಲಂಬಿಸಿದಂತೆ ಸ್ಮೃತಿಯ ಸತ್ಯತೆ ಅನುಭವದ ಸತ್ಯತೆಯನ್ನು ಆಧರಿಸಿದ್ದರೂ ಕೆಲವೊಮ್ಮೆ ಅನುಭವ ಸತ್ಯವಾಗಿದ್ದು ಆಕಸ್ಮಿಕಪ್ರಭಾವಗಳಿಂದ ಸ್ಮೃತಿ ಅಸತ್ಯವಾಗಬಹುದು. ಸ್ಮೃತಿಯು ಸಂಸ್ಕಾರದ್ವಾರಾ ಅನುಭವದ ಜೊತೆ ಸಂಬಂಧಿಸಿರುತ್ತದೆ. ಕಾಲದೇಶಾದಿಗಳ ಪ್ರಭಾವದಿಂದ ಸಂಸ್ಕಾರದಲ್ಲಿ ಉಂಟಾದ ಶೈಥಿಲ್ಯವು ಸ್ಮೃತಿಯ ಅಯಥಾರ್ಥತೆಗೆ ಕಾರಣವಾಗುತ್ತದೆ.

48. ಗ್ರಂಥದಲ್ಲಿಯ ಲಕ್ಷಣವು ಸುಖದ ಬಾಹ್ಯಸ್ವರೂಪವನ್ನು ಮಾತ್ರ ನಿರ್ದೇಶಿಸುತ್ತದೆ. ಸುಖವು

ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾದುದರಿಂದ ಲಕ್ಷಣದಲ್ಲಿಯ 'सर्वेषाम्' ಎಂಬ ಪದ ಅನುಚಿತವೆನಿಸುತ್ತದೆ. ಆದ್ದರಿಂದ 'ನಾನು ಸುಖಿ' ಎಂಬ ಅನುವ್ಯವಸಾಯವೇ (ಜ್ಞಾನ) ಸುಖದ ನಿಷ್ಕರ್ಷೆಯಲ್ಲಿ ಮಾನದಂಡ-ವಾಗುತ್ತದೆ. ಹೀಗಿದ್ದರೂ 'ನಾನು ಸುಖಿ' ಎಂಬುದಷ್ಟರಿಂದಲೇ ಸುಖದ ಲಕ್ಷಣ ಅಸಾಧ್ಯವಾದುದ-ರಿಂದ इतरेच्छानधीनेच्छाविषयत्वम् ಎಂದು ಸುಖವನ್ನು ವ್ಯಾಖ್ಯಾನಿಸುತ್ತಾರೆ. ಅಂದರೆ ಸುಖವು ಸ್ವನಿಷ್ಠವಾಗಿರುತ್ತದೆಯೇ ಹೊರತು ಮತ್ತೊಂದು ಇಚ್ಛೆಗೆ ಅಧೀನವಾಗಿರುವುದಿಲ್ಲ. ಸುಖದ ನಿರೂಪಣೆಯ ಈ ಕ್ರಮವು ಇದಕ್ಕೆ ವ್ಯತಿರಿಕ್ತವಾದ ಕ್ರಮದಲ್ಲಿ ದುಃಖಕ್ಕೂ ಅನ್ವಯಿಸುತ್ತದೆ.

ಸುಖದಲ್ಲಿ 'ಸಾಂಸಾರಿಕ' ಮತ್ತು 'ಸ್ವರ್ಗ' ಎಂದು ಎರಡು ಪ್ರಕಾರಗಳಿವೆ. ಸಾಂಸಾರಿಕಸುಖ-ವನ್ನು प्रयत्नोत्पाद्यसाधनाधीनम् ಎಂದೂ ಸ್ವರ್ಗಸುಖವನ್ನು इच्छामात्राधीनसाधनसाध्यम् ಎಂದೂ ವಿವರಿಸಲಾಗಿದೆ. ಮೀಮಾಂಸಕರೂ ಸುಖವನ್ನು ಇದೇ ಪ್ರಕಾರವಾಗಿ ವಿಭಜಿಸುತ್ತಾರೆ. ನೈಯಾಯಿಕರ ಪ್ರಕಾರ ಸುಖದಲ್ಲಿ ವೈಷಯಿಕ (ವಿಷಯಸಾಕ್ಷಾತ್ಕಾರಜನ್ಯ), ಆಭಿಮಾನಿಕ (ರಾಜಾಧಿಪತ್ಯ — ಇತ್ಯಾದಿ), ಮಾನೋರಥಿಕ (ವಿಷಯಧ್ಯಾನಜನ್ಯ) ಮತ್ತು ಆಭ್ಯಾಸಿಕ (ಸೂರ್ಯ ನಮಸ್ಕಾರಾದಿಜನ್ಯ) ಎಂದು ನಾಲ್ಕು ಪ್ರಕಾರಗಳಿವೆ.

ಗ್ರಂಥದಲ್ಲಿ ನೀಡಲಾದ ಕಾಮ, ಕ್ರೋಧ ಮತ್ತು ಕೃತಿಗಳು ಇಚ್ಛಾ, ದ್ವೇಷ ಮತ್ತು ಪ್ರಯತ್ನಗಳ ಪರ್ಯಾಯ ಪದಗಳೇ ಹೊರತು ಲಕ್ಷಣಗಳಲ್ಲ. ಇಚ್ಛೆಯನ್ನು ज्ञानजन्यत्वे सति कृतिजनकत्वम् ಎಂದೂ ದ್ವೇಷವನ್ನು ज्ञानजन्यत्वे सति निवृत्तिजनकत्वम् ಎಂದೂ ಲಕ್ಷಿಸುತ್ತಾರೆ.

ಇಚ್ಛೆಯು फलविषयिणी ಮತ್ತು उपायविषयिणी ಎಂದು ಎರಡು ವಿಧ. ಸುಖ ಮತ್ತು ದುಃಖಾಭಾವ ವಿಷಯಕವಾದುದೇ ಫಲವಿಷಯಿಣೀ. ಯೋಗಧ್ಯಾನಾದಿವಿಷಯಕವಾದುದು ಉಪಾಯವಿಷಯಿಣೀ.

ಪ್ರಯತ್ನವು ಇಚ್ಛಾಜನ್ಯವಾಗಿದ್ದು ಕರ್ಮಾಚರಣೆಗೆ ಪೂರ್ವಭಾವಿಯಾದ ಆತ್ಮಗುಣವಾಗಿದೆ. ಇದರಲ್ಲಿ ಪ್ರವೃತ್ತಿ, ನಿವೃತ್ತಿ ಮತ್ತು ಜೀವಯೋನಿ ಎಂದು ಮೂರು ವಿಧ. ಇಚ್ಛಾಜನ್ಯವಾದುದು ಪ್ರವೃತ್ತಿ, ದ್ವೇಷಜನ್ಯವಾದುದು ನಿವೃತ್ತಿ ಮತ್ತು ಸಾಹಜಿಕವಾದುದು ಜೀವಯೋನಿ. ಸುಖಕ್ಕೆ ಅಸಾಧಾರಣ- ಕಾರಣವಾದುದು ಧರ್ಮ. ದುಃಖಕ್ಕೆ ಅಸಾಧಾರಣಕಾರಣವಾದುದು ಅಧರ್ಮ. ಇವು ಅಪ್ರತ್ಯಕ್ಷವಾಗಿದ್ದು ಆಗಮ ಮತ್ತು ಅನುಮಾನಗಮ್ಯವಾಗಿವೆ. ಸುಖ-ದುಃಖ, ಇಚ್ಛಾ-ದ್ವೇಷ, ಧರ್ಮ-ಅಧರ್ಮ ಇವುಗಳು ಪರಸ್ಪರ ವಿರುದ್ಧಭಾವಗುಣಗಳೇ ಹೊರತು ಒಂದು ಇನ್ನೊಂದರ ಅಭಾವವಲ್ಲ.

49. ಬುದ್ಧಿ ಮುಂತಾದ ಎಂಟು ಗುಣಗಳು ಆತ್ಮನಲ್ಲಿ ಮಾತ್ರ ಇರುವುದರಿಂದ ಅವು ಆತ್ಮನ ವಿಶೇಷಗುಣಗಳಾಗಿವೆ ಎಂಬುದನ್ನು ಗ್ರಂಥದಲ್ಲಿಯ मात्र ಪದವು ಸೂಚಿಸುತ್ತದೆ. ವಿಶೇಷಗುಣವೆಂದರೆ ಒಂದು ಕಾಲದಲ್ಲಿ ಒಂದು ದ್ರವ್ಯದಲ್ಲಿ ಮಾತ್ರ ಇರುವ ಗುಣ. ಸಂಖ್ಯೆಯಿಂದ ಗುರುತ್ವದವರೆಗಿನ ಎಂಟು ಗುಣಗಳು, ನೈಮಿತ್ತಕದ್ರವತ್ವ, ವೇಗ ಮತ್ತು ಸ್ಥಿತಿಸ್ಥಾಪಕಗಳು ಒಂದು ಕಾಲದಲ್ಲಿ ಅನೇಕದ್ರವ್ಯಗಳಲ್ಲಿ ಇರುವುದರಿಂದ 'ಸಾಮಾನ್ಯಗುಣಗಳು' ಎಂದು ಕರೆಯಲ್ಪಡುತ್ತವೆ.

50. ಸಂಸ್ಕಾರದ ಮೂರು ಪ್ರಕಾರಗಳು ಎಷ್ಟು ವಿಭಿನ್ನಗುಣಧರ್ಮಗಳನ್ನು ಹೊಂದಿವೆ ಎಂದರೆ ಅದರ

ಸಾಮಾನ್ಯಲಕ್ಷಣವೇ ಅಸಂಭವವೆನಿಸುತ್ತದೆ. ಆದರೆ ಅನ್ಯತ್ರ ನಿರೂಪಿತವಾದ ಸಂಸ್ಕಾರದ ಲಕ್ಷಣ ಹೀಗಿದೆ: स्वोत्पादकसजातीयस्योत्पादकः स्वयं च तद्भिजातीयः गुणः। ತನ್ನ ಕಾರಣಕ್ಕೆ ಸಮಾನವಾದ ಕಾರ್ಯವನ್ನು— ತಾನು ಅವೆರಡರಿಂದಲೂ ಬೇರೆಯಾಗಿದ್ದುಕೊಂಡು— ಉತ್ಪಾದಿಸುವ ಗುಣವೇ ಸಂಸ್ಕಾರ. ಉಕ್ತಪ್ರಕಾರತ್ರಯಕ್ಕೂ ಈ ಲಕ್ಷಣವು ಅನ್ವಯಿಸುತ್ತದೆ. ವೇಗವು ಕರ್ಮದಿಂದ ಜನಿಸಿ ಇನ್ನೊಂದರಲ್ಲಿ ಕರ್ಮವನ್ನುಂಟುಮಾಡುತ್ತದೆ. ಶರಪ್ರಯೋಗದಿಂದ ಉಂಟಾದ ವೇಗವು ಶರದಲ್ಲಿ ಚಲನೆಯನ್ನುಂಟುಮಾಡುತ್ತದೆ. ಭಾವನೆಯು ಅನುಭವವೆಂಬ ಕಾರಣದಿಂದ ಜನಿಸಿ ಸ್ಮೃತಿಯೆಂಬ ಕಾರ್ಯವನ್ನು ಉಂಟುಮಾಡುತ್ತದೆ. ಸ್ಥಿತಿಸ್ಥಾಪಕವು ವೇಷ್ಟನಾದಿ (ಚಾಪೆ ಮುಂತಾದವುಗಳನ್ನು ಸುತ್ತಿಡುವಿಕೆ) ಕರ್ಮದಿಂದ ಜನಿಸಿ ವೇಷ್ಟನಕರ್ಮವನ್ನುಂಟುಮಾಡುತ್ತದೆ. ನಾಯಿಯ ಬಾಲ ಇದಕ್ಕೆ ಉತ್ತಮ ಉದಾಹರಣೆ.

ಇವುಗಳಲ್ಲಿ ವೇಗ ಮತ್ತು ಸ್ಥಿತಿಸ್ಥಾಪಕಗಳು ಸಾಮಾನ್ಯಗುಣಗಳಾಗಿದ್ದರೆ ಭಾವನೆಯು ಆತ್ಮದ ವಿಶೇಷಗುಣವಾಗಿದೆ. ಪರಿಚ್ಛಿನ್ನಪರಿಮಾಣರಹಿತವಾದುದು ವೇಗವನ್ನು ಹೊಂದಿರುವುದು ಸಾಧ್ಯವಿಲ್ಲವಾದ್ದರಿಂದ ವೇಗವು ಮೂರ್ತದ್ರವ್ಯಗಳಲ್ಲಿ ಮಾತ್ರ ಇರುತ್ತದೆ.

51. ಕೆಲವರು ಕರ್ಮದಲ್ಲಿ ಭ್ರಮಣ, ರೇಚನ, ಸ್ಯಂದನ, ಊರ್ಧ್ವಗಮನ ಮತ್ತು ತಿರ್ಯಕ್‌ಗಮನ ಎಂಬ ಭೇದಗಳನ್ನು ಅಂಗೀಕರಿಸಿದರೂ ಇವುಗಳು ತಾರ್ಕಿಕರ 'ಗಮನ' ಎಂಬ ಕರ್ಮಪ್ರಭೇದ-ದಲ್ಲಿಯೇ ಅಂತರ್ಗತವಾಗುತ್ತವೆ. ಕರ್ಮದ ಉಳಿದ ವಿವರಣೆಗೆ ಪರಿಚ್ಛೇದ 5ನ್ನು ನೋಡಿ.

52. ಗ್ರಂಥದಲ್ಲಿ ಸಾಮಾನ್ಯವನ್ನು ಪರ ಮತ್ತು ಅಪರ ಎಂದು ವಿಭಜಿಸಿದ್ದರೂ ಪರಾಪರ ಎಂಬ ಇನ್ನೊಂದು ವಿಭಾಗವನ್ನು ಅಂಗೀಕರಿಸುತ್ತಾರೆ. ಪರಸಾಮಾನ್ಯವು ಅಧಿಕದೇಶವೃತ್ತಿಯಾಗಿದ್ದು ವ್ಯಾಪಕವಾಗಿರುತ್ತದೆ. ಉದಾಹರಣೆಗೆ: ಸತ್ತಾ ಅಥವಾ ಅಸ್ತಿತ್ವ. ಅಪರ ಸಾಮಾನ್ಯವು ಅಲ್ಪದೇಶವೃತ್ತಿಯಾಗಿದ್ದು ವ್ಯಾಪ್ಯವಾಗಿರುತ್ತದೆ. ಉದಾ: ಘಟತ್ವ. ಇವೆರಡರ ಮಧ್ಯವರ್ತಿಯಾಗಿರುವ ಸಾಮಾನ್ಯವೇ ಪರಾಪರ. ದ್ರವ್ಯತ್ವವೆಂಬುದು ಸತ್ತಾಕ್ಕಿಂತ ಅಲ್ಪದೇಶವೃತ್ತಿಯೂ ಘಟತ್ವಕ್ಕಿಂತ ಅಧಿಕದೇಶವೃತ್ತಿಯೂ ಆಗಿದೆ.

ಸಾಮಾನ್ಯವನ್ನು ಅಖಂಡ ಅಥವಾ ಜಾತಿಸಾಮಾನ್ಯ ಹಾಗೂ ಸಖಂಡ ಅಥವಾ ಉಪಾಧಿಸಾಮಾನ್ಯ ಎಂದು ಬೇರೊಂದು ವಿಧವಾಗಿಯೂ ವಿಭಜಿಸುತ್ತಾರೆ. ಜಾತಿಯು ಸಾಕ್ಷಾತ್ತಾಗಿ ಸಂಬಂಧಿಸಿದ್ದು ನಿರ್ಬಾಧಕಸಾಮಾನ್ಯವಾಗಿದ್ದರೆ ಉಪಾಧಿಯು ಪರಂಪರೆಯಿಂದ ಸಂಬಂಧಿಸಿ ಸಬಾಧಕಸಾಮಾನ್ಯವಾಗಿರುತ್ತದೆ. ಈ ಪ್ರಕಾರವಾಗಿ ದ್ರವತ್ವ, ಗುಣತ್ವ, ಕರ್ಮತ್ವಾದಿಗಳು ಜಾತಿಸಾಮಾನ್ಯಗಳೂ ಪಾಚಕತ್ವ, ಶ್ವೇತತ್ವ ಮುಂತಾದವು ಉಪಾಧಿಸಾಮಾನ್ಯಗಳೂ ಆಗುತ್ತವೆ.

ತಾರ್ಕಿಕರು ಜಾತಿಕಲ್ಪನೆಗೆ ಆರು ವಿಧವಾದ ಬಾಧಕಗಳನ್ನು ನಿರೂಪಿಸುತ್ತಾರೆ:

1) ವ್ಯಕ್ತಿಯ ಅಭೇದ—ಒಂದು ವ್ಯಕ್ತಿಯಲ್ಲಿ ಮಾತ್ರ ಇರುವ ಧರ್ಮವು ಜಾತಿಯಾಗು-ವುದಿಲ್ಲ. ಉದಾಹರಣೆಗೆ, ಆಕಾಶವು ಏಕವಾಗಿರುವುದರಿಂದ ಮತ್ತು ಆಕಾಶತ್ವವು ಆಕಾಶ ಮಾತ್ರ ವೃತ್ತಿಯಾದುದರಿಂದ ಆಕಾಶತ್ವವು ಜಾತಿಯಾಗುವುದಿಲ್ಲ.

2) ತುಲ್ಯತ್ವ—ವ್ಯಕ್ತಿಯು ಸಮಾನವಾಗಿದ್ದು ಆ ವ್ಯಕ್ತಿವಾಚಕಗಳು ಅನೇಕವಿದ್ದರೆ ಅಲ್ಲಿ ಅನೇಕ ಜಾತಿಗಳು ಇರುವುದಿಲ್ಲ. ಘಟ ಮತ್ತು ಕಲಶ ಒಂದೇ ವ್ಯಕ್ತಿಯ ಎರಡು ಹೆಸರುಗಳಾಗಿದ್ದು ಆ ವ್ಯಕ್ತಿಯಲ್ಲಿ ಘಟತ್ವ ಮತ್ತು ಕಲಶತ್ವ ಎಂಬ ಭಿನ್ನಜಾತಿಗಳಿಲ್ಲ.

3) ಸಂಕರ—ಪರಸ್ಪರಭಿನ್ನಾಧಿಕರಣಗಳಾದ ಧರ್ಮಗಳು ಒಂದೇ ಅಧಿಕರಣದಲ್ಲಿ ಸಮಾವೇಶಗೊಳ್ಳುವಿಕೆ. ಭೂತತ್ವಕ್ಕೆ ಅಧಿಕರಣವಲ್ಲದ ಮನಸ್ಸಿನಲ್ಲಿ ಮೂರ್ತತ್ವವೂ ಮೂರ್ತತ್ವಕ್ಕೆ ಅಧಿಕರಣವಲ್ಲದ ಆಕಾಶದಲ್ಲಿ ಭೂತತ್ವವೂ ಇದ್ದು ಪೃಥಿವ್ಯಾದಿಚತುಷ್ಟಯದಲ್ಲಿ ಭೂತತ್ವ ಮತ್ತು ಮೂರ್ತತ್ವಗಳೆರಡೂ ಸಮಾವೇಶಗೊಳ್ಳುವುದರಿಂದ ಭೂತತ್ವ ಮತ್ತು ಮೂರ್ತತ್ವಗಳನ್ನು ಜಾತಿ ಎಂದು ಅಂಗೀಕರಿಸುವುದಿಲ್ಲ.

4) ಅನವಸ್ಥಾ—ಏಕವ್ಯಕ್ತಿಯಲ್ಲಿ ಅಪ್ರಮಾಣಿಕವಾದ ಏಕಜಾತಿಯ ಅನಂತಕಲ್ಪನೆ. ಘಟವೆಂಬ ವ್ಯಕ್ತಿಯಲ್ಲಿ ಘಟತ್ವವು ಜಾತಿಯಾಗಿದ್ದು, ಘಟತ್ವಕ್ಕೆ ಘಟತ್ವತ್ವ, ಘಟತತ್ವಕ್ಕೆ ಘಟತ್ವತ್ವತ್ವ ಹೀಗೆ ಕೊನೆಯಿಲ್ಲದೇ ಕಲ್ಪಿಸಬೇಕಾಗುತ್ತದೆ. ಆದ್ದರಿಂದ ಘಟತ್ವ ಮುಂತಾದ ಜಾತಿಗಳಿಗೆ ಮತ್ತೆ ಜಾತಿಕಲ್ಪನೆ ಇಲ್ಲ.

5) ರೂಪಹಾನಿ—ಸ್ವರೂಪದ ಸಿದ್ಧಿಯಾಗದಿರುವಿಕೆ. ಜಾತಿಕಲ್ಪನೆಯಿಂದ ವ್ಯಕ್ತಿಸ್ವರೂಪಕ್ಕೆ ಹಾನಿಯಾಗುವುದಾದರೆ ಜಾತಿಕಲ್ಪನೆ ಇರುವುದಿಲ್ಲ. ಉದಾ: ವಿಶೇಷದಲ್ಲಿ ವಿಶೇಷತ್ವ ಎಂಬ ಜಾತಿಯನ್ನು ಕಲ್ಪಿಸಿದರೆ ಅದರ 'ಸ್ವತೋವ್ಯಾವರ್ತಕತ್ವ' ಎಂಬ ಸ್ವರೂಪಕ್ಕೆ ಬಾಧೆಯುಂಟಾಗುತ್ತದೆ.

6) ಅಸಂಬಂಧ—ಜಾತಿಯು ವ್ಯಕ್ತಿಯಲ್ಲಿ ಸಮವಾಯಸಂಬಂಧದಿಂದ ಇರುತ್ತದೆ. ಸಮವಾಯ ಎಂಬ ವ್ಯಕ್ತಿಯಲ್ಲಿ ಸಮವಾಯತ್ವ ಎಂಬ ಜಾತಿಯನ್ನು ಕಲ್ಪಿಸುವುದಾದರೆ ಸಮವಾಯ ಮತ್ತು ಸಮವಾಯತ್ವದ ನಡುವೆ ಇರುವ ಸಂಬಂಧ ಯಾವುದೆಂಬ ಸಂದೇಹವುಂಟಾಗುತ್ತದೆ. ಆದ್ದರಿಂದ ಸಮವಾಯತ್ವವು ಜಾತಿಯಲ್ಲ. ಅದೇ ರೀತಿಯಲ್ಲಿ ಅಭಾವತ್ವವು ಜಾತಿಯಾಗುವುದಿಲ್ಲ.

ಹೀಗೆ ಜಾತಿಯು ದ್ರವ್ಯ, ಗುಣ ಮತ್ತು ಕರ್ಮಗಳಲ್ಲಿ ಮಾತ್ರವಿದ್ದು ಸಾಮಾನ್ಯ, ವಿಶೇಷ, ಸಮವಾಯ ಮತ್ತು ಅಭಾವಗಳಲ್ಲಿ ಇರುವುದಿಲ್ಲ.

53. ವಿಶೇಷಕ್ಕೆ ಗ್ರಂಥದಲ್ಲಿ ಕೊಟ್ಟ ಲಕ್ಷಣವಲ್ಲದೇ जातिरहितत्वे सति नित्यद्रव्यमात्रवृत्तिः। ಮತ್ತು एकमात्रसमवेतत्वे सति सामान्यशून्यः ಎಂಬ ಇತರ ಲಕ್ಷಣಗಳೂ ಇವೆ. ವಿಶೇಷವು ತಾನು ಯಾವುದನ್ನು ಆಶ್ರಯಿಸಿರುವುದೋ ಅದನ್ನು ಇತರರಿಂದ ಬೇರ್ಪಡಿಸುತ್ತದೆ. ಆದ್ದರಿಂದ ವಿಶೇಷವನ್ನು 'ಸ್ವಾಶ್ರಯವಿಶೇಷಕ' ಎಂದು ಕರೆಯುತ್ತಾರೆ. ಜೊತೆಗೆ ಒಂದು ವಿಶೇಷವು ತನ್ನನ್ನು ಇತರ ವಿಶೇಷಗಳಿಂದ ಬೇರ್ಪಡಿಸಿಕೊಳ್ಳುವುದರಿಂದ 'ಸ್ವತೋವ್ಯಾವರ್ತಕ' ಎಂದೂ ಕರೆಯುತ್ತಾರೆ.

ಮೀಮಾಂಸಕರು ಮತ್ತು ವೇದಾಂತಿಗಳು ವಿಶೇಷವನ್ನು ಅಂಗೀಕರಿಸುವುದಿಲ್ಲ.

54. ಸಂಯುಕ್ತವಾಗಬಲ್ಲ ಹಾಗೂ ಬೇರ್ಪಡಿಸಲು ಸಾಧ್ಯವಾಗಬಲ್ಲ ವಸ್ತುದ್ವಯವನ್ನು 'ಯುತಸಿದ್ಧಗಳು' ಎನ್ನುತ್ತಾರೆ. ಆದರೆ ಯಾವ ವಸ್ತುದ್ವಯವನ್ನು ಬೇರ್ಪಡಿಸಲಾಗಲಿ ಅಥವಾ ಸಂಯುಕ್ತಗೊಳಿಸಲಾಗಲಿ ಸಾಧ್ಯವಿಲ್ಲವೋ ಅವುಗಳನ್ನು 'ಅಯುತಸಿದ್ಧಗಳು' ಎನ್ನುತ್ತಾರೆ.

ಅವಯವಗಳಾದ ತಂತುಗಳು-ಅವಯವಿಯಾದ ಪಟ, ಶ್ವೇತ ಎಂಬ ಗುಣ-ಹಸು ಎಂಬ ಗುಣಿ, ಚಲನೆಯೆಂಬ ಕ್ರಿಯೆ-ಅಶ್ವವೆಂಬ ಕ್ರಿಯಾವಾನ್, ಘಟತ್ವ ಎಂಬ ಜಾತಿ-ಘಟವೆಂಬ ವ್ಯಕ್ತಿ, ವಿಶೇಷ ಎಂಬ ಪದಾರ್ಥ-ಪರಮಾಣು ಎಂಬ ನಿತ್ಯದ್ರವ್ಯ ಇವುಗಳ ನಡುವೆ ಇರುವ ಸಂಬಂಧವೇ ಸಮವಾಯ.

ಗ್ರಂಥದಲ್ಲಿಯ अविनश्यत् ಎಂಬ ವಿಶೇಷಣ ಎಲ್ಲ ಅಯುತಸಿದ್ಧಗಳಿಗೂ ಅನ್ವಯಿಸುವುದಿಲ್ಲ. ಉದಾಹರಣೆಗೆ, ವಿಶೇಷ ಹಾಗೂ ನಿತ್ಯದ್ರವ್ಯಗಳು ನಾಶವಾಗುವುದಿಲ್ಲ. ಆಗ ಸಮವಾಯದ ಲಕ್ಷಣವೇ ಅನ್ವಯವಾಗದ ಅವಸ್ಥೆಯೊದಗುತ್ತದೆ. ಆದ್ದರಿಂದ ನವೀನನೈಯಾಯಿಕರು ಸಮವಾಯದಲ್ಲಿ ಏಕತ್ವವನ್ನು ಒಪ್ಪುವುದಿಲ್ಲ.

ಸಮವಾಯವು ಈ ಕೆಳಗಿನ ಕಾರಣಗಳಿಂದ ಸಂಯೋಗಕ್ಕಿಂತ ಭಿನ್ನವಾಗಿದೆ:

1) ಸಂಯೋಗದಿಂದ ಸಂಬಂಧಿತವಾದ ವಸ್ತುದ್ವಯವು ಸಂಯೋಗಪೂರ್ವದಲ್ಲಿ ಪ್ರತ್ಯೇಕವಾಗಿರುತ್ತದೆ. ಆದರೆ ಸಮವಾಯದಿಂದ ಕೂಡಿರುವ ವಸ್ತುದ್ವಯವು ಎಂದಿಗೂ ಪ್ರತ್ಯೇಕವಾಗಿರುವುದಿಲ್ಲ.

2) ಸಂಯೋಗವು ವಿಭಾಗದಿಂದ ನಾಶವಾಗುತ್ತದೆ ಆದರೆ ಸಮವಾಯವು ಅವಿನಾಶಿಯಾದ ಸಂಬಂಧ.

3) ವಸ್ತುದ್ವಯದಲ್ಲಿಯ ಅನ್ಯತರ ಅಥವಾ ಉಭಯಕ್ರಿಯೆಯಿಂದ ಸಂಯೋಗ ಉಂಟಾದರೆ ಸಮವಾಯಕ್ಕೆ ಕ್ರಿಯೆಯ ಆವಶ್ಯಕತೆ ಇಲ್ಲ.

4) ಸಂಯೋಗವು ಬಾಹ್ಯವಾದ ಸಂಬಂಧವಾಗಿದ್ದರೆ ಸಮವಾಯವು ಆಂತರಿಕ ಮತ್ತು ಸಹಜಸಂಬಂಧವಾಗಿರುತ್ತದೆ.

ತಾರ್ಕಿಕದರ್ಶನದ 'ಕಾರಣವಾದ'(Theory of Causality)ವು ಸಮವಾಯವನ್ನು ಆಧರಿಸಿರುವುರಿಂದ ಸಮವಾಯಕ್ಕೆ ಅತಿಮಹತ್ವದ ಸ್ಥಾನವಿದೆ.

55. ಕಾಲಿಕ ಮತ್ತು ದೈಶಿಕಸಂಬಂಧದಿಂದ ಒಂದು ವಸ್ತು 'ಇದೆ' ಎನ್ನುವುದು ಎಷ್ಟು ಸತ್ಯವೋ ಇನ್ನೊಂದು ವಸ್ತುವು ಅದೇ ಸಂಬಂಧದಿಂದ 'ಇಲ್ಲ' ಎನ್ನುವುದೂ ಅಷ್ಟೇ ಸತ್ಯ. ಹೀಗೆ ವಸ್ತುವೊಂದು ಭಾವಕ್ಕೆ ವಿಷಯವಾಗಿರುವಂತೆ ಅಭಾವಕ್ಕೂ ವಿಷಯವಾಗಿರುತ್ತದೆ.

ಅಭಾವದಲ್ಲಿ ಮೂಲತಃ 'ಸಂಸರ್ಗಾಭಾವ' ಮತ್ತು 'ಅನ್ಯೋನ್ಯಾಭಾವ' ಎಂದು ಎರಡು ವಿಧ. ಸಂಸರ್ಗ ಅಥವಾ ಸಂಬಂಧವನ್ನು ನಿಷೇಧಿಸುವ ಸಂಸರ್ಗಾಭಾವವು ಪ್ರಾಗಭಾವ, ಪ್ರಧ್ವಂಸಾಭಾವ ಮತ್ತು ಅತ್ಯಂತಾಭಾವವೆಂದು ಮೂರು ವಿಧವಾಗಿರುತ್ತದೆ.

ವಸ್ತುವು ಉತ್ಪನ್ನವಾಗುವ ಮೊದಲು (ಪ್ರಾಕ್) ಅದರ ಕಾರಣದಲ್ಲಿರುವ ಆ ವಸ್ತುವಿನ ಅಭಾವವನ್ನು ಪ್ರಾಗಭಾವ ಎನ್ನುತ್ತಾರೆ. ಪಟವು ಉತ್ಪನ್ನವಾಗುವ ಪೂರ್ವದಲ್ಲಿ ಅದರ ಕಾರಣವಾದ ತಂತುಗಳಲ್ಲಿ ಪಟದ ಅಭಾವವಿದೆ. ಉತ್ಪನ್ನವಾದ ವಸ್ತುವಿನ ನಾಶವಾದ ಬಳಿಕ ಉಂಟಾಗುವ ಆ ವಸ್ತುವಿನ ಅಭಾವವನ್ನು ಪ್ರಧ್ವಂಸಾಭಾವ ಎನ್ನುತ್ತಾರೆ.

ಅತ್ಯಂತಾಭಾವದ ನಿರೂಪಣೆ ಅತ್ಯಂತ ಕ್ಲಿಷ್ಟವಾಗಿದೆ. ಕಾರಿಕಾವಳಿ, ಮುಕ್ತಾವಳಿಗಳಲ್ಲಿ

ಅತ್ಯಂತಾಭಾವವನ್ನು त्रैकालिकसंसर्गाभाव: ಎಂದು ಲಕ್ಷಿಸಲಾಗಿದೆ. भूतले घटो नास्ति ಎಂಬುದು ಈ ಅಭಾವಕ್ಕೆ ನೀಡಲಾದ ಉದಾಹರಣೆ. ಸಾಮಾನ್ಯವಾಗಿ 'ಅಲ್ಲ' ಎಂಬ ಪ್ರತೀತಿಗೆ ವಿಷಯವಾದುದು ಅನ್ಯೋನ್ಯಾಭಾವವಾದರೆ 'ಇಲ್ಲ' ಎಂಬ ಪ್ರತೀತಿಗೆ ವಿಷಯವಾದುದು ಅತ್ಯಂತಾಭಾವ. ಆದ್ದರಿಂದಲೇ 'ನಾಸ್ತಿ' ಎಂಬ ಪ್ರತೀತಿಸಿದ್ಧವಾದ ಅನುಯೋಗಿತಾವಿಶೇಷರೂಪ ಎಂದೂ ಅತ್ಯಂತಭಾವವನ್ನು ಲಕ್ಷಿಸುತ್ತಾರೆ.

ಇಲ್ಲಿ ಅನುಯೋಗಿ ಹಾಗೂ ಪ್ರತಿಯೋಗಿ ಈ ಪರಿಭಾಷೆಗಳ ವಿವರಣೆ ಅಗತ್ಯ. ಯೋಗವೆಂದರೆ ಸಂಬಂಧ. 'ಅನು' ಎಂಬುದು ಕಾಲಕ್ರಮದಲ್ಲಿ ಆನಂತರ್ಯವನ್ನು ಸೂಚಿಸಿದರೆ 'ಪ್ರತಿ' ಎಂಬುದು ಪೂರ್ವಸ್ಥಿತಿಯನ್ನು ಸೂಚಿಸುತ್ತದೆ. भूतले घटो नास्ति ಎಂದಾಗ 'ನಾಸ್ತಿ' ಎಂಬುದು ಅಭಾವವನ್ನು ಪ್ರಕಟಿಸುತ್ತದೆ. ಈ ಅಭಾವಕ್ಕೆ ಪೂರ್ವದಲ್ಲಿದ್ದ ಘಟವನ್ನು ಪ್ರತಿಯೋಗಿ ಎನ್ನುತ್ತಾರೆ. ಅನಂತರದಲ್ಲಿದ್ದ ಭೂತಲವನ್ನು ಅನುಯೋಗಿ ಎನ್ನುತ್ತಾರೆ. ಆದ್ದರಿಂದ ಅತ್ಯಂತಾಭಾವವೆಂದರೆ ಈ ಉದಾಹರಣೆಯಲ್ಲಿ ಭೂತಲಾನುಯೋಗಿಕ ಘಟಪ್ರತಿಯೋಗಿಕ ಅಭಾವ ಎಂದಾಗುತ್ತದೆ.

ಪ್ರತಿಯೋಗಿತಾ ಮತ್ತು ಅನುಯೋಗಿತಾ ಎಂಬವು ಸಂಬಂಧಸೂಚಕವಾಗಿವೆ. भूतले घट: ಎಂದಾಗ ಭೂತಲ ಹಾಗೂ ಘಟಗಳ ನಡುವೆ ಸಂಯೋಗಸಂಬಂಧವಿದೆ. ಈ ಸಂಯೋಗಸಂಬಂಧಕ್ಕೆ ಘಟ ಪ್ರತಿಯೋಗಿ, ಭೂತಲ ಅನುಯೋಗಿ. ಹೀಗೆ ಅನುಯೋಗಿತಾವಿಶೇಷವೇ ಅತ್ಯಂತಾಭಾವ ಎಂಬ ಅರ್ಥವೂ ಇದೆ.

ಅತ್ಯಂತಾಭಾವ ಹಾಗೂ ಅನ್ಯೋನ್ಯಾಭಾವಗಳ ವ್ಯತ್ಯಾಸವನ್ನು ಗ್ರಹಿಸುವಿಕೆ ಅತ್ಯಂತಾಭಾವವನ್ನು ಇನ್ನೂ ಸ್ಪಷ್ಟವಾಗಿ ತಿಳಿಯಲು ಸಹಕರಿಸೀತು. ಅನ್ಯೋನ್ಯಾಭಾವದಲ್ಲಿ ಪ್ರತಿಯೋಗಿಯಲ್ಲಿರುವ ಧರ್ಮದ ಭೇದವಿರುತ್ತದೆ. ಉದಾಹರಣೆಗೆ, घट: पटो न ಎಂಬ ಭೇದಾತ್ಮಕವಾದ ಅನ್ಯೋನ್ಯಾ-ಭಾವದಲ್ಲಿ ಘಟತ್ವರೂಪಧರ್ಮದ ಭೇದ ಪಟದಲ್ಲಿದೆ. ಆದರೆ ಅತ್ಯಂತಾಭಾವದಲ್ಲಿ ಧರ್ಮದ ಸಂಬಂಧಭೇದವಿರುತ್ತದೆ. ಇದನ್ನೇ संसर्गावच्छिन्नप्रतियोगिताक: ಎಂದಿದ್ದು, ಎಂದರೆ ಸಂಸರ್ಗಭೇದ ಎಂದರ್ಥ.

ಸಂಸರ್ಗವೆಂದರೆ ವಿಶೇಷಣತ್ವದಿಂದ ಆಧೇಯವಾಗಿರುವುದು ಎಂದು ಅರ್ಥ. ಪ್ರಕೃತ ಉದಾಹರಣೆಯಲ್ಲಿ ಭೂತಲ ವಿಶೇಷ್ಯ; ಘಟಾಭಾವ ವಿಶೇಷಣ. ಭೂತಲ ಆಧಾರವಾದರೆ ಘಟಾಭಾವ ಆಧೇಯ. ಹೀಗೆ ಭೂತಲದಲ್ಲಿ ವಿಶೇಷಣತ್ವದಿಂದ ಆಧೇಯವಾಗಿರುವುದು ಘಟಾಭಾವ. ಆದ್ದರಿಂದ ಘಟಾಭಾವವು ಸಂಸರ್ಗಾವಚ್ಛಿನ್ನ ಪ್ರತಿಯೋಗಿತಾಕವಾಗಿದೆ. ಇನ್ನು ಇಲ್ಲಿಯ ಸಂಸರ್ಗ ಎಂಬುದಕ್ಕೆ 'ತ್ರೈಕಾಲಿಕ' ಎಂಬ ವಿಶೇಷಣವಿದೆ. ಹಾಗೆಂದರೆ ಮೂರು ಕಾಲಗಳಲ್ಲಿಯೂ ಸಂಸರ್ಗದಿಂದ ಕೂಡಿದ ಅಭಾವ ಎಂದು ಅರ್ಥ. ಘಟವು ಯಾವುದಾದರೂ ಒಂದು ಕಾಲದಲ್ಲಿ ಇರಲೇಬೇಕಲ್ಲ? ಇದರಿಂದ ಇರುವ ಘಟವನ್ನೂ ಇಲ್ಲವೆನ್ನಬೇಕಾದ ಅವಸ್ಥೆಯೊದಗುತ್ತದೆ. ಇದಕ್ಕೆ ಪರಿಹಾರ ಹೀಗಿದೆ: भूतले घटो नास्ति ಎಂಬ ಪ್ರತೀತಿ ದೇಶಕಾಲಗಳ ಉಪಾಧಿಯಿಂದ ಕೂಡಿದೆ. ಒಂದು ನಿರ್ದಿಷ್ಟ ಕಾಲವಿಶಿಷ್ಟವಾದ ಅಭಾವ ಮೂರು ಕಾಲಗಳಲ್ಲಿಯೂ ಇರುತ್ತದೆ. ಉದಾಹರಣೆಗೆ, 'ಇಂದು ಏಳು ಘಂಟೆಗೆ ಇಲ್ಲಿ ಘಟಾಭಾವವಿದೆ' ಎಂದರೆ ಇಂದಿನ ಈ ಏಳು ಗಂಟೆಗೆ ವಿಶಿಷ್ಟವಾದ ಅಭಾವ ನಿನ್ನೆಯೂ ಇತ್ತು, ನಾಳೆಯೂ ಇರುತ್ತದೆ. ಹೀಗಾಗಿ ಕಾಲವಿಶಿಷ್ಟವಾದ ಅಭಾವ ಮೂರು

ಕಾಲಗಳಲ್ಲಿಯೂ ಇರುವುದರಿಂದ घटो नास्ति ಎಂಬ ಪ್ರತೀತಿಸಿದ್ಧವಾದ ಘಟಾಭಾವವು ತ್ರೈಕಾಲಿಕ ಸಂಸರ್ಗಾವಚ್ಛಿನ್ನಪ್ರತಿಯೋಗಿತಾಕವಾಗಿದೆ.

ಪ್ರತ್ಯೇಕವಾದ ವಸ್ತುದ್ವಯದಲ್ಲಿ 'ಒಂದು ಇನ್ನೊಂದಲ್ಲ' ಎಂಬ ವ್ಯವಹಾರದಿಂದ ಪ್ರತೀತವಾಗುವ ಅಭಾವವೇ ಅನ್ಯೋನ್ಯಾಭಾವ. 'ಘಟವು ಪಟವಲ್ಲ' ಎಂಬಲ್ಲಿ ಘಟವು ಪಟದಲ್ಲಿ ಸ್ವ-ರೂಪದಿಂದ ಇರುವುದಿಲ್ಲ ಮತ್ತು ಪಟವು ಘಟದಲ್ಲಿ ಸ್ವ-ರೂಪದಿಂದ ಇರುವುದಿಲ್ಲ. ಇದನ್ನೇ ತಾದಾತ್ಮ್ಯ ಸಂಬಂಧದಿಂದ ಇಲ್ಲದಿರುವಿಕೆ ಎನ್ನುತ್ತಾರೆ. ಹೀಗೆ ತಾದಾತ್ಮ್ಯಸಂಬಂಧದಿಂದ ವಸ್ತುವೊಂದು ಇನ್ನೊಂದು ವಸ್ತುವಿನಲ್ಲಿ ಇಲ್ಲದಿರುವುದೇ ಅನ್ಯೋನ್ಯಾಭಾವ.

ತಾರ್ಕಿಕರು ಅಭಾವವನ್ನು ಪ್ರತ್ಯೇಕಪದಾರ್ಥವೆಂದು ಅಂಗೀಕರಿಸುವುದಕ್ಕೆ ಅಪವರ್ಗದ ಪ್ರತಿಪಾದನೆ ಮಾತ್ರವಲ್ಲದೇ ಇತರ ಕಾರಣಗಳನ್ನು ಕೊಡಬಹುದು. ವಿಶ್ವದಲ್ಲಿರುವ ವಸ್ತುಗಳು ಪರಿವರ್ತನರಹಿತವಾಗಿದ್ದರೆ ಎಲ್ಲ ವಸ್ತುಗಳಿಗೂ ನಿತ್ಯತೆಯನ್ನು ಅಂಗೀಕರಿಸಬೇಕಾಗುತ್ತದೆ. ಆಗ ನೂತನವಸ್ತುಗಳ ಉತ್ಪತ್ತಿಗೂ ಉತ್ಪನ್ನವಸ್ತುಗಳ ನಾಶಕ್ಕೂ ಅವಕಾಶವಿಲ್ಲದೇ ವಿಶ್ವದ ಕ್ರಿಯೆಯೇ ಸ್ಥಗಿತವಾಗುತ್ತದೆ. ವಸ್ತುಗಳ ನಡುವೆ ಪರಸ್ಪರವಾದ ಅಭಾವವಿಲ್ಲದಿದ್ದರೆ ಅವುಗಳಿಗೆ ಪ್ರತ್ಯೇಕತೆಯೇ ಉಳಿಯುವುದಿಲ್ಲ. ಇನ್ನು ಅತ್ಯಂತಾಭಾವವನ್ನು ಕಲ್ಪಿಸದಿದ್ದರೆ ಎಲ್ಲವೂ ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲದಲ್ಲಿಯೂ ಇವೆಯೆನ್ನಬೇಕಾಗುತ್ತದೆ. ಹೀಗೆ ಚತುರ್ವಿಧ ಅಭಾವವನ್ನು ನಿರಾಕರಿಸಿದಲ್ಲಿ ಲೋಕವ್ಯವಹಾರವೇ ಅರ್ಥಹೀನವಾಗುತ್ತದೆ. ಈ ಎಲ್ಲ ಕಾರಣಗಳಿಂದ 'ಅಭಾವ' ಎಂಬ ಪದಾರ್ಥವು ತಾರ್ಕಿಕದರ್ಶನವು ತಾತ್ತ್ವಿಕಚಿಂತನೆಗೆ ನೀಡಿದ ಮಹತ್ತ್ವಪೂರ್ಣವಾದ ಕೊಡುಗೆಯಾಗಿದೆ.

ಮುಕ್ತಿವಾದ

ತರ್ಕಸಂಗ್ರಹದಲ್ಲಿ ಸಪ್ತ ಪದಾರ್ಥಗಳು ನಿರೂಪಿತವಾಗಿದ್ದರೂ ತಾರ್ಕಿಕದರ್ಶನದ ಅಂಗವಾದ ನ್ಯಾಯದರ್ಶನದ ಆದಿಮಗ್ರಂಥವೆನಿಸಿದ ಗೌತಮನ ನ್ಯಾಯಸೂತ್ರದ ಪ್ರಥಮಸೂತ್ರದಲ್ಲಿ ಹದಿನಾರು ಪದಾರ್ಥಗಳು ನಿರೂಪಿತವಾಗಿವೆ ಹಾಗೂ ಈ ಪದಾರ್ಥಗಳ ನಿಜಸ್ವರೂಪವನ್ನು ಅರಿಯುವುದರಿಂದಲೇ ನಿಃಶ್ರೇಯಸಪ್ರಾಪ್ತಿಯೆಂದೂ ಪ್ರತಿಪಾದಿಸಲಾಗಿದೆ. ಜಿಜ್ಞಾಸುಗಳ ಪ್ರಯೋಜನಕ್ಕಾಗಿ ಷೋಡಶ ಪದಾರ್ಥಗಳನ್ನು ಇಲ್ಲಿ ಸಂಗ್ರಹಿಸಲಾಗಿದೆ:

1) ಪ್ರಮಾಣ— प्रमीयते अनेन इति प्रमाणम् ಅಥವಾ प्रमाता येन अर्थं प्रमिणोति तत् प्रमाणम्।

2) ಪ್ರಮೇಯ— प्रमाविषयत्वम् ಅಥವಾ प्रमाणप्रतिपाद्योऽर्थः ಅಥವಾ योऽर्थः तत्त्वतः प्रमीयते - तत् प्रमेयम्।

3) ಸಂಶಯ— ಟಿಪ್ಪಣಿಯಲ್ಲಿ ಘಟಕ 46ನ್ನು ನೋಡಿ.

4) ಪ್ರಯೋಜನ— सुखं दुःखहानिश्च प्रयोजनम्।

5) ದೃಷ್ಟಾಂತ— लौकिकपरीक्षकाणां यस्मिन्नर्थे बुद्धिसाम्यं स दृष्टान्तः।

6) ಸಿದ್ಧಾಂತ— प्रामाणिकत्वेन अभ्युपगतोऽर्थः सिद्धान्तः।

7) ಅವಯವ— ಟಿಪ್ಪಣಿಯಲ್ಲಿ ಘಟಕ 33ನ್ನು ನೋಡಿ.

8) ತರ್ಕ— अज्ञाततत्त्वेऽर्थे कारणोपपत्तित: तत्त्वज्ञानार्थम् ऊह: तर्क:।
9) ನಿರ್ಣಯ— विमृश्य पक्षप्रतिपक्षाभ्यामर्थावधारणं निर्णय:।
10) ವಾದ— तत्त्वबुभुत्सो: कथा वाद:।
11) ಜಲ್ಪ— उभयसाधनवती विजगीषुकथा जल्प:।
12) ವಿತಂಡಾ— स्वपक्षस्थापनहीना वितण्डा।
13) ಹೇತ್ವಾಭಾಸ— ಟಿಪ್ಪಣಿಯಲ್ಲಿ ಘಟಕ 36ನ್ನು ನೋಡಿ.
14) ಛಲ— अभिप्रायान्तरेण प्रयुक्तस्य अर्थान्तरं प्रकल्प्य दूषणं छलम्।
15) ಜಾತಿ— असदुत्तरं जाति:।
16) ನಿಗ್ರಹಸ್ಥಾನ— वादिन: अपजयहेतु: निग्रहस्थानम्।

ಈ ಷೋಡಶ ಪದಾರ್ಥಗಳು ಸಪ್ತ ಪದಾರ್ಥಗಳಲ್ಲಿಯೇ ಅಂತರ್ಗತವಾಗುತ್ತವೆ ಎಂಬುದು ತರ್ಕಸಂಗ್ರಹದ ಸಿದ್ಧಾಂತ.

पदार्थज्ञानस्य परमं प्रयोजनं मोक्ष:। ಎಂದು ದೀಪಿಕೆಯಲ್ಲಿ ಹೇಳಿರುವ ಪ್ರಕಾರ ಪದಾರ್ಥವಿಂಗಡಣೆಯ ಮೂಲಕ ಭೌತಿಕಪ್ರಪಂಚದ ವ್ಯಾಪ್ತಿಯನ್ನು ನಿರ್ಧರಿಸಿ ಯಥಾರ್ಥಜ್ಞಾನವನ್ನು ಹೊಂದುವುದು ಮುಕ್ತಿಯ ಪ್ರಥಮಸೋಪಾನವಾಗಿದೆ. ಮುಕ್ತಿಗೆ ಅಪವರ್ಗ ಎಂಬ ನಾಮಾಂತರವಿದ್ದು ಅದನ್ನು स्वसमानाधिकरणदु:खप्रागभावासमानकालीनदु:खध्वंस:। ಎಂದು ದೀಪಿಕೆಯಲ್ಲಿ ವ್ಯಾಖ್ಯಾನಿಸಲಾಗಿದೆ.

ಮೀಮಾಂಸಕರ ಪ್ರಕಾರ ಕರ್ಮದಿಂದಲೇ ಮೋಕ್ಷಪ್ರಾಪ್ತಿ. ಆದರೆ ಕರ್ಮವು ದುರಿತಕ್ಷಯದ್ವಾರಾ ಜ್ಞಾನಕ್ಕೆ ಸಾಧನವಾಗಿದೆಯೇ ಹೊರತು ಕರ್ಮದಿಂದಲೇ ಮೋಕ್ಷಪ್ರಾಪ್ತಿಯಲ್ಲ. ज्ञानद्वारैव कर्म मोक्षसाधनं न साक्षात्।

तमेव विदित्वाऽतिमृत्युमेति। नान्य: पन्था विद्यतेऽयनाय। ಎಂಬ ಶ್ರುತಿವಾಕ್ಯ ಸಾಧನಾಂತರವನ್ನು ನಿಷೇಧಿಸಿ ಜ್ಞಾನವೊಂದೇ ಮೋಕ್ಷಸಾಧನ ಎಂದು ಪ್ರತಿಪಾದಿಸಿದೆ. ಹಾಗೆಯೇ—

आत्मा वा अरे द्रष्टव्य: श्रोतव्यो मन्तव्यो निदिध्यासितव्य:

ಎಂಬ ಶ್ರುತಿವಾಕ್ಯದ ಪ್ರಕಾರ ಶ್ರವಣ, ಮನನ ಮತ್ತು ನಿದಿಧ್ಯಾಸನಗಳು ಮೋಕ್ಷಸಾಧನಗಳು. ದೀಪಿಕೆಯ ಉಪಟೀಕೆಗಳಲ್ಲಿ ಒಂದಾದ ನೃಸಿಂಹಪ್ರಕಾಶಿಕಾ ಎಂಬುದರ ಪ್ರಕಾರ ಇವುಗಳಲ್ಲಿ ವೇದಾಂತಶಾಸ್ತ್ರವು ಶ್ರವಣೋಪಯೋಗಿಯೂ, ನ್ಯಾಯಶಾಸ್ತ್ರವು ಮನನೋಪಯೋಗಿಯೂ ಮತ್ತು ಯೋಗಶಾಸ್ತ್ರವು ನಿದಿಧ್ಯಾಸನೋಪಯೋಗಿಯೂ ಆಗಿ ಮುಕ್ತಿಪ್ರಯೋಜಕವಾಗಿವೆ.

श्रीः

# अथ तर्कदीपिका

विश्वेश्वरं साम्बमूर्तिं प्रणिपत्य गिरां गुरुम्।
टीकां शिशुहितां कुर्वे तर्कसङ्ग्रहदीपिकाम्॥

1. चिकीर्षितस्य ग्रन्थस्य निर्विघ्नपरिसमाप्त्यर्थं शिष्टाचारानुमितश्रुतिबोधितकर्तव्यताकमिष्टदेवतानमस्कारलक्षणं मङ्गलं शिष्यशिक्षार्थं निबध्नंश्चिकीर्षितं ग्रन्थादौ प्रतिजानीते–**निधायेति**। ननु मङ्गलस्य समाप्तिसाधनत्वं नास्ति। मङ्गले कृतेऽपि कादम्बर्यादौ समाप्त्यदर्शनात्, मङ्गलाभावेऽपि किरणावल्यादौ समाप्तिदर्शनात्–अन्वयव्यतिरेकव्यभिचारादिति चेन्न। कादम्बर्यादौ विघ्नबाहुल्यात्समाप्त्यभावः। किरणावल्यादौ तु ग्रन्थाद्बहिरेव मङ्गलं कृतम्, अतो न व्यभिचारः। ननु मङ्गलस्य कर्तव्यत्वे किं प्रमाणमिति चेन्न। शिष्टाचारानुमितश्रुतेरेव प्रमाणत्वात्। तथाहि मङ्गलं वेदबोधितकर्तव्यताकम्, अलौकिकाविगीतशिष्टाचारविषयत्वात्, दर्शादिवत्। भोजनादौ व्यभिचारवारणायालौकिकेति। रात्रिश्राद्धादौ व्यभिचारवारणायाविगीतेति। शिष्टपदं स्पष्टार्थम्। ''न कुर्यान्निष्फलं कर्म'' इति जलताडनादेरपि निषिद्धत्वादिति। **तर्कसङ्ग्रह** इति। तर्क्यन्ते प्रतिपाद्यन्त इति तर्का द्रव्यादिसप्तपदार्थाः, तेषां सङ्ग्रहः–संक्षेपेण स्वरूपकथनं क्रियत इत्यर्थः। कस्मै प्रयोजनायेत्यत आह–**सुखबोधायेति**। सुखेनानायासेन बोधः पदार्थज्ञानं तस्मा इत्यर्थः। ननु बहुषु तर्कग्रन्थेषु सत्सु किमर्थमपूर्वग्रन्थः क्रियत इत्यत आह–**बालानामिति**। तेषामतिविस्तृतत्वाद् बालानां बोधो न भवतीत्यर्थः। ग्रहणधारणपटुर्बालः, न तु स्तनंधयः। किं कृत्वा क्रियत इत्यत आह–**निधायेति**। विश्वेशं जगन्नियन्तारं शिवं हृदि

निधाय नितरां स्थापयित्वा सर्वदा तद्ध्यानपरो भूत्वेत्यर्थः। गुरूणां विद्यागुरूणां वन्दनं नमस्कारं विधाय कृत्वेत्यर्थः।

2. पदार्थान्विभजते–**द्रव्येति**। पदस्यार्थः पदार्थ इति व्युत्पत्त्याभिधेयत्वं पदार्थसामान्यलक्षणम्।

नन्वत्र विभागादेव सप्तत्वे सिद्धे सप्तग्रहणं व्यर्थमिति चेन्न। अधिकसङ्ख्याव्यवच्छेदार्थत्वात्। नन्वतिरिक्तः पदार्थः प्रमितो न वा? नाद्यः–प्रमितस्य निषेधायोगात्। नान्त्यः–प्रतियोगिप्रमितिं विना निषेधानुपपत्ते-रिति चेन्न। पदार्थत्वं द्रव्यादिसप्तान्यतमत्वव्याप्यमिति व्यवच्छेदार्थत्वात्। ननु सप्तान्यतमत्वं सप्तभिन्नभिन्नत्वमिति वक्तव्यम्। एवं च सप्तभिन्नस्याप्रसिद्ध-त्वात्सप्तान्यतमत्वं कथमिति चेत्–

न, द्रव्यादिसप्तान्यतमत्वं द्रव्यादिभेदसप्तकाभाववत्त्वमित्युक्तत्वात्। एवमग्रेऽपि द्रष्टव्यम्।

3. द्रव्यं विभजते–**तत्रेति**। तत्र द्रव्यादिमध्ये द्रव्याणि नवैवेत्यन्वयः। कानि तानीत्यत आह–**पृथिवीत्यादि**।

ननु तमसो दशमद्रव्यस्य विद्यमानत्वात्कथं नवैव द्रव्याणि? तथाहि नीलं तमश्चलतीत्यबाधितप्रतीतिबलान्नीलरूपाधारतया क्रियाधारतया च द्रव्यत्वं तावत्सिद्धम्। तत्र तमसो नाकाशादिपञ्चकेऽन्तर्भावो, रूपवत्त्वात्। अत एव न वायौ, स्पर्शाभावात्सदागतिमत्त्वाभावाच्च। नापि तेजसि, भास्वररूपाभावादुष्ण-स्पर्शाभावाच्च। नापि जले, शीतस्पर्शाभावान्नीलरूपाश्रयत्वाच्च। नापि पृथिव्याम्, गन्धवत्त्वाभावात्स्पर्शरहितत्वाच्च। तस्मात्तमो दशमद्रव्यमिति चेत्–

न, तमसस्तेजोऽभावरूपत्वात्। तथाहि–तमो हि न रूपवद्द्रव्यम्,

